|  |  |  |  |  |  |  |
|---|---|---|---|---|---|---|
|  |  |  | ಯುಜಿಡಿ ಕಾರ್ಮಿಕರ | – | – | – |
|  |  |  | ಯುಜಿಡಿ ಸಹಾಯಕರ | – | – | – |
|  |  | ಪುರಸಭೆ ಸೇಡಂ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 12 | 14386/- ಒಟ್ಟು 1,72,632/- | ಜೈ-ಭವನಿ ಮ್ಯಾನ್ ಪವರ್ ಮತ್ತು ಲೇಬರ್ ಸಪ್ಲೈ ಬಸವ ನಗರ ಸೇಡಂ 9902922230 |
|  |  |  | ವಾಟರ್ ಮೆನ್ | 4 | 13993/- ಒಟ್ಟು 55,972/- | ಪ್ರಜ್ವಲ್ ಮ್ಯಾನ್ ಪವರ್ ಏಜೆನ್ಸಿ ಸುಧಾ ಗುತ್ತೆದಾರ ಕಲಬುರಗಿ ಮೊ:6741647311 |
|  |  |  | ಡೇಟಾ ಎಂಟ್ರಿ ಆಪರೇಟರ್ಸ್ | 2 | 17940/- ಒಟ್ಟು 35,880/- | ಜೈ-ಭವನಿ ಮ್ಯಾನ್ ಪವರ್ ಮತ್ತು ಲೇಬರ್ ಸಪ್ಲೈ ಬಸವ ನಗರ ಸೇಡಂ 9902922230 |
|  |  |  | ಯುಜಿಡಿ ಕಾರ್ಮಿಕರ | – | – | – |
|  |  |  | ಯುಜಿಡಿ ಸಹಾಯಕರ | – | – | – |
|  |  | ಪುರಸಭೆ ಚಿಂಚೋಳಿ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 7 | 14386/- ಒಟ್ಟು 1,00,702/- | ಶ್ರೀಮತಿ ಸುಧಾ ಗುತ್ತೆದಾರ (ಪ್ರಜವಲ ಮ್ಯಾನಪರ್ ಏಜೆನ್ಸಿ) ಕಲಬುರಗಿ ಮೋ. ಸಂ. 9741947311 |
|  |  |  | ವಾಟರ್ ಮೆನ್ | 4 | 13993/- ಒಟ್ಟು 55,972/- |  |
|  |  |  | ಡೇಟಾ ಎಂಟ್ರಿ ಆಪರೇಟರ್ಸ್ | – | – | – |
|  |  |  | ಯುಜಿಡಿ ಕಾರ್ಮಿಕರ | – | – | – |
|  |  |  | ಯುಜಿಡಿ ಸಹಾಯಕರ | – | – | – |
|  |  | ಪುರಸಭೆ ಅಫಜಲಪೂರ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 9 | 14386/- ಒಟ್ಟು 1,29,474/- | ಕರ್ನಾಟಕ ಸೆಕ್ಯೂರಿಟಿ ಸರ್ವಿಸ್ ಕಲಬುರಗಿ ಮೊ:9482901316 |
|  |  |  | ವಾಟರ್ ಮೆನ್ | 12 | 13993/- ಒಟ್ಟು 1,67,916/- |  |
|  |  |  | ಡೇಟಾ ಎಂಟ್ರಿ ಆಪರೇಟರ್ಸ್ | – | – | – |
|  |  |  | ಯುಜಿಡಿ ಕಾರ್ಮಿಕರ | – | – | – |
|  |  |  | ಯುಜಿಡಿ ಸಹಾಯಕರ | – | – | – |
|  |  | ಪುರಸಭೆ ಜೇವರ್ಗಿ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 8 | 14386/- ಒಟ್ಟು 1,15,088/- | ಮೇ॥ ಮಾರುತಿ ಮ್ಯಾನ್ ಪವರ್ ಏಜನ್ಸಿ, ಅಫ್ಜಲ್‌ಪುರ ರಸ್ತೆ, ಹಿರಾಪುರ ಕ್ರಾಸ್, ಕಲಬುರಗಿ |
|  |  |  | ವಾಟರ್ ಮೆನ್ | 10 | 13993/- ಒಟ್ಟು 1,39,930/- | ಮೇ॥ ಪ್ರಜ್ವಲ್ ಮ್ಯಾನ್ ಪವರ್ ಏಜನ್ಸಿ, ಕಲಬುರಗಿ ಮೊ. 9741947311 |
|  |  |  | ಡೇಟಾ ಎಂಟ್ರಿ ಆಪರೇಟರ್ಸ್ | 2 | 17940/- ಒಟ್ಟು 35,880/- | ಪುರೋಹಿತ ಕಂಪ್ಯೂಟರ್ಸ್ & ಐಟಿ ಸರ್ವಿಸ್, ಅಫ್ಜಲ್‌ಪುರ-585301. ಮೊ. 9902660248 |
|  |  |  | ಯುಜಿಡಿ ಕಾರ್ಮಿಕರ | – | – | – |
|  |  |  | ಯುಜಿಡಿ ಸಹಾಯಕರ | – | – | – |
|  |  | ಪಟ್ಟಣ ಪಂಚಾಯತ ಕಮಲಾಪೂರ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | – | – | – |
|  |  |  | ವಾಟರ್ ಮೆನ್ | – | – | – |
|  |  |  | ಡೇಟಾ ಎಂಟ್ರಿ ಆಪರೇಟರ್ಸ್ | – | – | – |
|  |  |  | ಯುಜಿಡಿ ಕಾರ್ಮಿಕರ | – | – | – |
|  |  |  | ಯುಜಿಡಿ ಸಹಾಯಕರ | – | – | – |
|  |  | ಪಟ್ಟಣ ಪಂಚಾಯತ ಯಡ್ರಾಮಿ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | – | – | – |
|  |  |  | ವಾಟರ್ ಮೆನ್ | – | – | – |
|  |  |  | ಡೇಟಾ ಎಂಟ್ರಿ ಆಪರೇಟರ್ಸ್ | – | – | – |

|  |  |  |  |  |  |  |
|---|---|---|---|---|---|---|
|  |  |  | ಯುಜಿಡಿ ಕಾರ್ಮಿಕರ | – | – | – |
|  |  |  | ಯುಜಿಡಿ ಸಹಾಯಕರ | – | – | – |
|  |  | ಪಟ್ಟಣ ಪಂಚಾಯತ ಕಾಳಗಿ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 3 | 13902/- ಒಟ್ಟು 41,706/- | ಪ್ರಜ್ವಲ್ ಮ್ಯಾನ್ ಪವರ ಏಜೆನ್ಸಿ ಮೊ:9741947311 |
|  |  |  | ವಾಟರ್ ಮೆನ್ | – | – | – |
|  |  |  | ಡೇಟಾ ಎಂಟ್ರಿ ಆಪರೇಟರ್ಸ್ | 1 | ಒಟ್ಟು 15196/- | ಚಂದ್ರಕಾಂತ ಆರ್ ಉದಯಕರ ಮ್ಯಾನ್ ಪವರ ಏಜೆನ್ಸಿ ಮೊ":9972562184 |
|  |  |  | ಯುಜಿಡಿ ಕಾರ್ಮಿಕರ | – | – | – |
|  |  |  | ಯುಜಿಡಿ ಸಹಾಯಕರ | – | – | – |
|  |  | ಅಧಿಸೂಚಿತ ಕ್ಷೇತ್ರ ಸಮಿತಿ ಶಹಬಾದ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | – | – | – |
|  |  |  | ವಾಟರ್ ಮೆನ್ | – | – | – |
|  |  |  | ಡೇಟಾ ಎಂಟ್ರಿ ಆಪರೇಟರ್ಸ್ | – | – | – |
|  |  |  | ಯುಜಿಡಿ ಕಾರ್ಮಿಕರ | – | – | – |
|  |  |  | ಯುಜಿಡಿ ಸಹಾಯಕರ | – | – | – |
| 26 | ಯಾದಗಿರಿ | ನಗರಸಭೆ ಯಾದಗಿರಿ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 22 | 329802 (14991) | ಮಾರುತಿ ಮ್ಯಾನಪವರ ಏಜೆನ್ಸಿ, ಹೀರಾಪೂರ್ ಕ್ರಾಸ್, ಅಪ್ಜಲಪೂರ ರೋಡ್, ಕಲಬುರ್ಗಿ ಮೊಬೈಲ್ ನಂ.9611177779 |
|  |  |  | ವಾಟರ್ ಮೆನ್ | 12 | 167916 (13993) | ಪೂಜಾ ಲೇಬರ್ ಗುತ್ತಿಗೆದಾರರು, ಬಸವೇಶ್ವರ ನಗರ, ಯಾದಗಿರಿ ಮೊ.ನಂ.8105072131 |
|  |  |  | ಡೇಟಾ ಎಂಟ್ರಿ ಆಪರೇಟರ್ಸ್ | 3 | 37818 (12606) | ಮಲ್ಟಿಟೇಕ್ ಕಂಪ್ಯೂಟರ್ಸ್ ಯುವ ಡಾಟ್ ಕಂ. ಕಿಯೋನಿಕ್ಸ್,ಯಾದಗಿರಿ.ಮೊಬೈಲ್ ನಂ.8105072131 |
|  |  |  | ಯುಜಿಡಿ ಕಾರ್ಮಿಕರ | - | - | - |
|  |  |  | ಯುಜಿಡಿ ಸಹಾಯಕರ | - | - | - |
|  |  | ನಗರಸಭೆ ಶಹಾಪೂರ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 18 | 332532 (18474) | ಪೂಜಾ ಲೇಬರ್ ಕಾಂಟ್ರಕ್ಟರ್ಸ ಬಸವೇಶ್ವರ ನಗರ ಯಾದಗಿರಿ 8105072131 ರಮೇಶ ದೊಡ್ಡಮನಿ |
|  |  |  | ವಾಟರ್ ಮೆನ್ |  |  |  |
|  |  |  | ಡೇಟಾ ಎಂಟ್ರಿ ಆಪರೇಟರ್ಸ್ | 5 | 100995 (20199) | ಪೂಜಾ ಲೇಬರ್ ಕಾಂಟ್ರಕ್ಟರ್ಸ ಬಸವೇಶ್ವರ ನಗರ ಯಾದಗಿರಿ 8105072131 ರಮೇಶ ದೊಡ್ಡಮನಿ |
|  |  |  | ಯುಜಿಡಿ ಕಾರ್ಮಿಕರ | – | – | – |
|  |  |  | ಯುಜಿಡಿ ಸಹಾಯಕರ | – | – | – |
|  |  | ನಗರಸಭೆ ಸುರಪೂರ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 18 | 331524 (18418) | ಮ್ಯಾನ್ ಪವರ್ ಏಜೆನ್ಸಿ ಕಲಬುರಗಿ, ಮೊ.ನಂ.9620249333 |
|  |  |  | ವಾಟರ್ ಮೆನ್ | 0 | 0 | 0 |
|  |  |  | ಡೇಟಾ ಎಂಟ್ರಿ ಆಪರೇಟರ್ಸ್ | 0 | 0 | 0 |
|  |  |  | ಯುಜಿಡಿ ಕಾರ್ಮಿಕರ | 0 | 0 | 0 |
|  |  |  | ಯುಜಿಡಿ ಸಹಾಯಕರ | 0 | 0 | 0 |
|  |  | ಪುರಸಭೆ ಗುರುಮಠಕಲ್ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 11 | 129630 (11784.51) | ಡಾ|| ಬಿ.ಆರ್. ಅಂಬೇಡ್ಕರ್ ವಿವಿದೋದ್ದೇಶ ಸಂಘ, ಅಲ್ಲಿಪುರ, ತಾ:: ಜಿಲ್ಲೆ : ಯಾದಗಿರಿ. ಪೋ ನಂ. 9845973672 |
|  |  |  | ವಾಟರ್ ಮೆನ್ | – | – | – |
|  |  |  | ಡೇಟಾ ಎಂಟ್ರಿ ಆಪರೇಟರ್ಸ್ | – | – | – |
|  |  |  | ಯುಜಿಡಿ ಕಾರ್ಮಿಕರ | – | – | – |
|  |  |  | ಯುಜಿಡಿ ಸಹಾಯಕರ | – | – | – |
|  |  | ಪುರಸಭೆ ಕಕ್ಕೇರಾ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 4 | 52532 (13133) | ಗುತ್ತಿಬಸವೇಶ್ವರ ಏಜೆನ್ಸಿ ತಾಳಿಕೋಟ ಪೋ ನಂ: ಪೋ ನಂ 8050324060 |
|  |  |  | ವಾಟರ್ ಮೆನ್ | 1 | 12281 |  |
|  |  |  | ಡೇಟಾ ಎಂಟ್ರಿ ಆಪರೇಟರ್ಸ್ | 2 | 28230(14115) |  |
|  |  |  | ಯುಜಿಡಿ ಕಾರ್ಮಿಕರ | – | – | – |
|  |  |  | ಯುಜಿಡಿ ಸಹಾಯಕರ | – | – | – |
|  |  | ಪುರಸಭೆ ಕೆಂಭಾವಿ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 9 | 121554 (13506) | ಶ್ರೀ ಬಸವೇಶ್ವರ ಶಿಕ್ಷಣ ಮತ್ತು ಗ್ರಾಮೀಣಾಭಿವೃದ್ಧಿ ಸಂಸ್ಥೆ 118 ಚಾಮನಾಳ ತಾ.ಶಹಾಪುರ ಜಿ.ಯಾದಗಿರಿ ದೂರವಾಣಿ-8722866111, 8747817917 |
|  |  |  | ವಾಟರ್ ಮೆನ್ | 1 | 13149 |  |
|  |  |  | ಡೇಟಾ ಎಂಟ್ರಿ ಆಪರೇಟರ್ಸ್ | 2 | 29454(14727) |  |
|  |  |  | ಯುಜಿಡಿ ಕಾರ್ಮಿಕರ | 0 | – |  |

|  |  |  |  |  |  |  |
|---|---|---|---|---|---|---|
|  |  |  | ಯುಜಿಡಿ ಸಹಾಯಕರ | 0 | - |  |
|  |  | ಪಟ್ಟಣ ಪಂಚಾಯಿತಿ ಹುಣಸಗಿ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | - | - | - |
|  |  |  | ವಾಟರ್ ಮೆನ್ | - | - | - |
|  |  |  | ಡೇಟಾ ಎಂಟ್ರಿ ಆಪರೇಟರ್ಸ್ | - | - | - |
|  |  |  | ಯುಜಿಡಿ ಕಾರ್ಮಿಕರ | - | - | - |
|  |  |  | ಯುಜಿಡಿ ಸಹಾಯಕರ | - | - | - |
| 27 | ರಾಯಚೂರು ಜಿಲ್ಲೆ | ನಗರಸಭ ರಾಯಚೂರು | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 22 | ರೂ.13,836.18 per Head (304405.00) | ಶ್ರೀ ಎಸ್.ಕೆ.ನಾಗರೆಡ್ಡಿ I ನೇ ದರ್ಜೆ ಗುತ್ತೇದಾರರು ಮೊ.ಸಂ.: |
|  |  |  | ವಾಟರ್ ಮೆನ್ | 25 | ರೂ.16008.00per Head (400170) | ಶ್ರೀ ಸೋಲಕುಮಾರ Iನೇ ದರ್ಜೆ ಗುತ್ತೇದಾರರು, ಹರಿಜನವಾಡ್ ಮೊ.ಸಂ.:9449203338 |
|  |  |  | ಡೇಟಾ ಎಂಟ್ರಿ ಆಪರೇಟರ್ಸ್ | 13 | ರೂ.22,228=00 per Head (288964) | ಕಿಯೋನಿಕ್ಸ್ ಬೆಂಗಳೂರು |
|  |  |  | ಯುಜಿಡಿ ಕಾರ್ಮಿಕರ | 0 | 0 | 0 |
|  |  |  | ಯುಜಿಡಿ ಸಹಾಯಕರ | 0 | 0 | 0 |
|  |  | ನಗರಸಭೆ ಸಿಂಧನೂರು | ತ್ಯಾಜ್ಯ ಸಾಗಿಸುವ ವಾಹನ ಚಾಲಕರು | 15 | 1.61802 | S.M.S Manpower Agency Siruguppa Mobile No:9986609851 |
|  |  |  | ವಾಟರ್ ಮೆನ್ | 0 | 0 | - |
|  |  |  | ಡೇಟಾ ಎಂಟ್ರಿ ಆಪರೇಟರ್ಸ್ | 3 | 61708 | Corporate Office No:3/48/2 I,t floor,6th Main,patel Channigappa Industrial Estate Sunkadakatte Bangalore-560091, Mobile No:9742676797 |
|  |  |  | ಯುಜಿಡಿ ಕಾರ್ಮಿಕರ | 0 | - | - |
|  |  |  | ಯುಜಿಡಿ ಸಹಾಯಕರ | 0 | - | - |
|  |  | ಪುರಸಭೆ ಮಾನವಿ | ತ್ಯಾಜ್ಯ ಸಾಗಿಸುವ ವಾಹನ ಚಾಲಕರು | 0 | - | - |
|  |  |  | ವಾಟರ್ ಮೆನ್ | 0 | - | - |
|  |  |  | ಡೇಟಾ ಎಂಟ್ರಿ ಆಪರೇಟರ್ಸ್ | 0 | - | - |
|  |  |  | ಯುಜಿಡಿ ಕಾರ್ಮಿಕರ | 0 | - | - |
|  |  |  | ಯುಜಿಡಿ ಸಹಾಯಕರ | 0 | - | - |
|  |  | ಪುರಸಭೆ ದೇವದುರ್ಗ | ತ್ಯಾಜ್ಯ ಸಾಗಿಸುವ ವಾಹನ ಚಾಲಕರು | 6 | 136836.00 | ಲಾಲ್ ಅಹ್ಮದ ಮ್ಯಾನ್ ಪವರ್ ಏಜೆನ್ಸಿ ಆಂಡ್ ಸರ್ವೀಸ್ ಸಿಂಧನೂರು ಮೊ॥ 7019780286 |
|  |  |  | ವಾಟರ್ ಮೆನ್ | 3 |  |  |
|  |  |  | ಡೇಟಾ ಎಂಟ್ರಿ ಆಪರೇಟರ್ಸ್ | 0 | - | - |
|  |  |  | ಯುಜಿಡಿ ಕಾರ್ಮಿಕರ | 0 | - | - |
|  |  |  | ಯುಜಿಡಿ ಸಹಾಯಕರ | 0 | - | - |
|  |  | ಪುರಸಭೆ ಲಿಂಗಸುಗೂರು | ತ್ಯಾಜ್ಯ ಸಾಗಿಸುವ ವಾಹನ ಚಾಲಕರು | 7 | 12150 | Vinayak Agency Bengalor, Mobile Number: 782727193 |
|  |  |  | ವಾಟರ್ ಮೆನ್ | 0 | - | - |
|  |  |  | ಡೇಟಾ ಎಂಟ್ರಿ ಆಪರೇಟರ್ಸ್ | 0 | - | - |
|  |  |  | ಯುಜಿಡಿ ಕಾರ್ಮಿಕರ | 0 | - | - |
|  |  |  | ಯುಜಿಡಿ ಸಹಾಯಕರ | 0 | - | - |
|  |  | ಪುರಸಭೆ ಮುದಗಲ್ | ತ್ಯಾಜ್ಯ ಸಾಗಿಸುವ ವಾಹನ ಚಾಲಕರು | 11 | 165491 | Shivappa Gundappa Yadahalli( Proprietor) Three Star Security & Labour Serviers Shivashanti Bungalow, Ward No-5, Nava Nagar near BSNL Office Hungung, Ph No:9225114277 |
|  |  |  | ವಾಟರ್ ಮೆನ್ | 0 | 0 | - |
|  |  |  | ಡೇಟಾ ಎಂಟ್ರಿ ಆಪರೇಟರ್ಸ್ | 0 | 0 | 0 |
|  |  |  | ಯುಜಿಡಿ ಕಾರ್ಮಿಕರ | 0 | 0 | 0 |
|  |  |  | ಯುಜಿಡಿ ಸಹಾಯಕರ | 0 | 0 | 0 |
|  |  | ಪುರಸಭೆ ಮಸ್ಕಿ | ತ್ಯಾಜ್ಯ ಸಾಗಿಸುವ ವಾಹನ ಚಾಲಕರು | 0 | - | - |
|  |  |  | ವಾಟರ್ ಮೆನ್ | 0 | - | - |

| | | | | | | |
|---|---|---|---|---|---|---|
| | | | ಡೇಟಾ ಎಂಟ್ರಿ ಆಪರೇಟರ್ಸ್ | 0 | – | – |
| | | | ಯುಜಿಡಿ ಕಾರ್ಮಿಕರ | 0 | – | – |
| | | | ಯುಜಿಡಿ ಸಹಾಯಕರ | 0 | – | – |
| | | ಪ.ಪಂ ಸಿರವಾರ | ತ್ಯಾಜ್ಯ ಸಾಗಿಸುವ ವಾಹನ ಚಾಲಕರು | 0 | – | – |
| | | | ವಾಟರ್ ಮೆನ್ | 0 | - | – |
| | | | ಡೇಟಾ ಎಂಟ್ರಿ ಆಪರೇಟರ್ಸ್ | 0 | 0 | – |
| | | | ಯುಜಿಡಿ ಕಾರ್ಮಿಕರ | 0 | – | – |
| | | | ಯುಜಿಡಿ ಸಹಾಯಕರ | 0 | – | – |
| | | ಪ.ಪಂ ಕವಿತಾಳ | ತ್ಯಾಜ್ಯ ಸಾಗಿಸುವ ವಾಹನ ಚಾಲಕರು | 4 | ರೂ 67,753/- | F. FORCE SECURITY Bengaluru, Mob: 9845688804/ 9036504203 |
| | | | ವಾಟರ್ ಮೆನ್ | 0 | | -- |
| | | | ಡೇಟಾ ಎಂಟ್ರಿ ಆಪರೇಟರ್ಸ್ | 1 | | Karnataka State Electronics Development Corporation Limited. Bengaluru. Phone: 080-22225645. |
| | | | ಯುಜಿಡಿ ಕಾರ್ಮಿಕರ | 0 | -- | -- |
| | | | ಯುಜಿಡಿ ಸಹಾಯಕರ | 0 | -- | -- |
| | | ಪ.ಪಂ ಬಳಗಾನೂರು | ತ್ಯಾಜ್ಯ ಸಾಗಿಸುವ ವಾಹನ ಚಾಲಕರು | 0 | – | – |
| | | | ವಾಟರ್ ಮೆನ್ | 0 | – | – |
| | | | ಡೇಟಾ ಎಂಟ್ರಿ ಆಪರೇಟರ್ಸ್ | 0 | – | – |
| | | | ಯುಜಿಡಿ ಕಾರ್ಮಿಕರ | 0 | – | – |
| | | | ಯುಜಿಡಿ ಸಹಾಯಕರ | 0 | – | – |
| | | ಪ.ಪಂ ತುರ್ವಿಹಾಳ | ತ್ಯಾಜ್ಯ ಸಾಗಿಸುವ ವಾಹನ ಚಾಲಕರು | 2 | 13400(ಪ್ರತಿಯೊಬ್ಬರಿಗೆ ರೂ.6700/-) | ಮಲ್ಲಿಕಾರ್ಜುನ ಬಸವೇಶ್ವರ ಎಲೆಕ್ಟ್ರಿಕಲ್ಸ್ ಸಿಂಧನೂರು 9035705998 |
| | | | ವಾಟರ್ ಮೆನ್ | 0 | – | ಹೊರಗುತ್ತಿಗೆ ಆಧಾರದ ಮೇಲೆ ಯಾರು ಇರುವುದಿಲ್ಲ |
| | | | ಡೇಟಾ ಎಂಟ್ರಿ ಆಪರೇಟರ್ಸ್ | 0 | – | ಹೊರಗುತ್ತಿಗೆ ಆಧಾರದ ಮೇಲೆ ಯಾರು ಇರುವುದಿಲ್ಲ |
| | | | ಯುಜಿಡಿ ಕಾರ್ಮಿಕರ | 0 | – | ಯುಜಿಡಿ ಸಂಪರ್ಕವಿರುವುದಿಲ್ಲ |
| | | | ಯುಜಿಡಿ ಸಹಾಯಕರ | 0 | – | – |
| | | ಪ.ಪಂ ಹಟ್ಟಿ | ತ್ಯಾಜ್ಯ ಸಾಗಿಸುವ ವಾಹನ ಚಾಲಕರು | 0 | – | – |
| | | | ವಾಟರ್ ಮೆನ್ | 0 | – | – |
| | | | ಡೇಟಾ ಎಂಟ್ರಿ ಆಪರೇಟರ್ಸ್ | 0 | – | – |
| | | | ಯುಜಿಡಿ ಕಾರ್ಮಿಕರ | 0 | – | – |
| | | | ಯುಜಿಡಿ ಸಹಾಯಕರ | 0 | – | – |
| 28 | ಕೊಪ್ಪಳ | ನಗರಸಭೆ ಕೊಪ್ಪಳ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 28 | 4538016 | ಶ್ರೀನಿವಾಸ ಸೆಕ್ಯೂರಿಟಿ ಸರ್ವಿಸಸ್ ಸಿ.ಬಿ.ಎಸ್.ಸಿ. ಸರ್ಕಲ್ ಕನಕಗಿರಿ ರಸ್ತೆ ಗಂಗಾವತಿ ಮೊ ಸಂ.7406346555 |
| | | | ವಾಟರ್ ಮೆನ್ | - | - | - |
| | | | ಡೇಟಾ ಎಂಟ್ರಿ ಆಪರೇಟರ್ಸ್ | 4 | 581328 | ನೇಹಾಲ್ ಗ್ರಾಮೀಣಾಭಿವೃದ್ಧಿ ಶೈಕ್ಷಣಿ ಹಾಗೂ ವಿವಿದ್ಯೋದ್ದೇಶ ಸಂಸ್ಥೆ ಗಂಗಾವತಿ ಮೊ ಸಂ 9148331420 |
| | | | ಯುಜಿಡಿ ಕಾರ್ಮಿಕರ | - | - | - |
| | | | ಯುಜಿಡಿ ಸಹಾಯಕರ | - | - | - |
| | | ನಗರಸಭೆ ಗಂಗಾವತಿ | ತ್ಯಾಜ್ಯ ಸಾಗಿಸುವ ವಾಹನಚಾಲಕರ | 29 | 14717.00 | ಚಿನ್ಮಯಿ ಗ್ರೂಪ್ಸ್ ಸೆಕ್ಯೂರಿಟಿ & ಲೇಬರ್ ಏಜೇನ್ಸಿ ದಾಸರ ಓಣಿ ಗದಗ ಮೊ.ಸಂ.9980443356 |
| | | | ವಾಟರ್ ಮೆನ್ | 15 | 14748.20 | |
| | | | ಡೇಟಾ ಎಂಟ್ರಿ ಆಪರೇಟರ್ಸ್ | 6 | 16137.60 | |
| | | | ಯುಜಿಡಿ ಕಾರ್ಮಿಕರ | 0 | 0 | 0 |
| | | | ಯುಜಿಡಿ ಸಹಾಯಕರ | 0 | 0 | 0 |
| | | ಪುರಸಭೆ ಕುಷ್ಟಗಿ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 4 | 54024 | ಶ್ರೀ ಸ್ಟಾರ್ ಸೆಕ್ಯೂರಟಿ & ಲೇಬರ್ ಸರ್ವಿಸ್ ಹುನಗುಂದ ದೂರವಾಣಿ 9225114277 |
| | | | ವಾಟರ್ ಮೆನ್ | 8 | 105184 | ಶ್ರೀ ಸ್ಟಾರ್ ಸೆಕ್ಯೂರಟಿ & ಲೇಬರ್ ಸರ್ವಿಸ್ ಹುನಗುಂದ ದೂರವಾಣಿ 9225114277 |
| | | | ಡೇಟಾ ಎಂಟ್ರಿ ಆಪರೇಟರ್ಸ್ | 3 | 44184 | ಕಿಯೋನಿಕ್ಸ್ ಸಂಸ್ಥೆ ಶಾಂತಿ ನಗರ ಬೆಂಗಳೂರು, 6363626202 |
| | | | ಯುಜಿಡಿ ಕಾರ್ಮಿಕರ | 0 | 0 | 0 |
| | | | ಯುಜಿಡಿ ಸಹಾಯಕರ | 0 | 0 | 0 |

| | | | | | | |
|---|---|---|---|---|---|---|
| | | ಪುರಸಭೆ ಕಾರಟಗಿ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 6 | 15382 | ಶ್ರೀ ಶ್ರೀನಿವಾಸ ಸೆಕ್ಯೂರಿಟಿ ಸರ್ವೀಸಸ್ ಗಂಗಾವತಿ. |
| | | | ವಾಟರ್ ಮೆನ್ | – | – | – |
| | | | ಡೇಟಾ ಎಂಟ್ರಿ ಆಪರೇಟರ್ಸ್ | – | – | – |
| | | | ಯುಜಿಡಿ ಕಾರ್ಮಿಕರ | – | – | – |
| | | | ಯುಜಿಡಿ ಸಹಾಯಕರ | – | – | – |
| | | ಪಟ್ಟಣ ಪಂಚಾಯಿತಿ ಯಲಬುರ್ಗಾ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 3 | ರೂ.17472/1<br>ರೂ.18137/1(ಜೆಸಿಬಿ)<br>(3 ಜನಕ್ಕೆ ಒಟ್ಟು:69809 ಇಎಸ್ಐ&ಪಿಎಫ್ ಸೇರಿ) | ಅಧ್ಯಕ್ಷರು. ವಿಜಯದುರ್ಗಾ ಗ್ರಾಮೀಣಾಭಿವೃದ್ಧಿ ಹಾಗೂ ಶಿಕ್ಷಣ ಸಂಸ್ಥೆ(ರಿ) ಯಲಬುರ್ಗಾ-583236 ಜಿಲ್ಲಾ ಕೊಪ್ಪಳ ದೂರವಾಣಿ-8884583313 |
| | | | ವಾಟರ್ ಮೆನ್ | 5 | ರೂ.16360/1 (5 ಜನಕ್ಕೆ ಒಟ್ಟು:81802.32 ಇಎಸ್ಐ&ಪಿಎಫ್ ಸೇರಿ) | ಚಿನ್ನ ಗ್ರೂಪ್ಸ್ ಶೆಕ್ಯೂರಿಟ & ಲೇಬರ್ ಏಜೆನ್ಸಿ ಗದಗ ದೂರವಾಣಿ:9980443569 |
| | | | ಡೇಟಾ ಎಂಟ್ರಿ ಆಪರೇಟರ್ಸ್ | 0 | – | – |
| | | | ಯುಜಿಡಿ ಕಾರ್ಮಿಕರ | 0 | – | – |
| | | | ಯುಜಿಡಿ ಸಹಾಯಕರ | 0 | – | – |
| | | ಪಟ್ಟಣ ಪಂಚಾಯಿತಿ ಕುಕನೂರು | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 3 | 14249.57 | ಎಸ್.ವಿ.ಎಸ್.ಟೆಕ್ನಾಲಜೀಸ್ ತುಮಕೂರ |
| | | | ವಾಟರ್ ಮೆನ್ | 0 | 0 | 0 |
| | | | ಡೇಟಾ ಎಂಟ್ರಿ ಆಪರೇಟರ್ಸ್ | 0 | 0 | – |
| | | | ಯುಜಿಡಿ ಕಾರ್ಮಿಕರ | 0 | 0 | – |
| | | | ಯುಜಿಡಿ ಸಹಾಯಕರ | 0 | 0 | – |
| | | ಪಟ್ಟಣ ಪಂಚಾಯಿತಿ ಕನಕಗಿರಿ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 5 | ಕಾರ್ಮಿಕ ಇಲಾಖೆ ನಿಗದಿಪಡಿಸಿರುವ ಕನಿಷ್ಟ ವೇತನಾನುಸಾರ:13066 (ವಿ.ಡಿ.ಎ. ಸೇರಿ) | ಶ್ರಿ ಅಮರಯ್ಯ. ಪಿ.ಡಬ್ಲ್ಯೂಡಿ ಮ್ಯಾನ್ ಪವರ್ ಏಜೆನ್ಸಿ, ಕುಂಟೋಜಿ, ಗಂಗಾವತಿ |
| | | | ವಾಟರ್ ಮೆನ್ | – | – | – |
| | | | ಡೇಟಾ ಎಂಟ್ರಿ ಆಪರೇಟರ್ಸ್ | – | – | – |
| | | | ಯುಜಿಡಿ ಕಾರ್ಮಿಕರ | – | – | – |
| | | | ಯುಜಿಡಿ ಸಹಾಯಕರ | – | – | – |
| | | ಪಟ್ಟಣ ಪಂಚಾಯಿತಿ ತಾವರಗೇರಾ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 2 | ರೂ.12389*2=24708 | ಶ್ರೀ ಸ್ವಾಭಿಮಾನಿ ಮ್ಯಾನ್‌ಪವರ್ ಏಜೆನ್ಸಿ ಕೊಪ್ಪಳ. ಟೆಂಡರ್ ಪಡೆದ ವಿವರ ನವೆಂಬರ್-2019 |
| | | | ವಾಟರ್ ಮೆನ್ | 0 | 0 | 0 |
| | | | ಡೇಟಾ ಎಂಟ್ರಿ ಆಪರೇಟರ್ಸ್ | 1 | 0 | ಕರ್ನಾಟಕ ರಾಜ್ಯ ಎಲೆಕ್ಟ್ರಾನಿಕ್ಸ್ ಡೆವಲಪ್‌ಮೆಂಟ್ ಕಾರ್ಪೋರೇಷನ್ ಲಿಮಿಟೆಡ್ ಬೆಂಗಳೂರು ದಿನಾಂಕ:01-10-2021 (Kionics) |
| | | | ಯುಜಿಡಿ ಕಾರ್ಮಿಕರ | 0 | 0 | 0 |
| | | | ಯುಜಿಡಿ ಸಹಾಯಕರ | 0 | 0 | 0 |
| | | ಪಟ್ಟಣ ಪಂಚಾಯಿತಿ ಭಾಗ್ಯನಗರ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 8 | 115407 | 1) Gemini Security & Allied Services, Davangere-Phone No.9343300128 |
| | | | ವಾಟರ್ ಮೆನ್ | 1 | 14426 | |
| | | | ಡೇಟಾ ಎಂಟ್ರಿ ಆಪರೇಟರ್ಸ್ | 1 | 20947 | 2) KEONICS, Koppal. Phone No.080-22282477 |
| | | | ಯುಜಿಡಿ ಕಾರ್ಮಿಕರ | 0 | 0 | – |
| | | | ಯುಜಿಡಿ ಸಹಾಯಕರ | 0 | 0 | – |
| 29 | ಬೀದರ | ನಗರಸಭೆ ಬೀದರ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 47 | (ಒಬ್ಬರಿಗೆ 12073) ಒಟ್ಟು 5,67,431 | ಬೀದರ ಜಿಲ್ಲಾ ಕಾರ್ಮಿಕ ಸೇವೆಗಳ ವಿವಿದ್ದೋದೇಶ ಸಹಕಾರ ಸಂಘ ಜಿಲ್ಲಾಧಿಕಾರಿ ಕಛೇರಿ ಬೀದರ ದೂರವಾಣಿ ಸಂಖ್ಯೆ:08482-229659 |
| | | | ವಾಟರ್ ಮೆನ್ | 46 | (ಒಬ್ಬರಿಗೆ 11737) ಒಟ್ಟು 5,39,902 | |
| | | | ಡೇಟಾ ಎಂಟ್ರಿ ಆಪರೇಟರ್ಸ್ | 4 | (ಒಬ್ಬರಿಗೆ 12,967) ಒಟ್ಟು 51,868 | |
| | | | ಯುಜಿಡಿ ಕಾರ್ಮಿಕರ | – | – | |
| | | | ಯುಜಿಡಿ ಸಹಾಯಕರ | – | – | |

| | | | | | | |
|---|---|---|---|---|---|---|
| | | ನಗರಸಭೆ ಬಸವಕಲ್ಯಾಣ | ತ್ಯಾಜ್ಯ ಸಾಗಿಸುವ ವಾಹನ ಚಾಲಕರು | 5 | (ಒಬ್ಬರಿಗೆ 11785) ಒಟ್ಟು 58,925 | ಬೀದರ ಜಿಲ್ಲಾ ಕಾರ್ಮಿಕ ಸೇವೆಗಳ ವಿವಿದ್ದೋದೇಶ ಸಹಕಾರ ಸಂಘ ಜಿಲ್ಲಾಧಿಕಾರಿ ಕಛೇರಿ ಬೀದರ ದೂರವಾಣಿ ಸಂಖ್ಯೆ:08482-229659 |
| | | | ವಾಟರ್ ಮೆನ್ | 22 | (ಒಬ್ಬರಿಗೆ 11473) ಒಟ್ಟು 2,52,406 | |
| | | | ಡೇಟಾ ಎಂಟ್ರಿ ಆಪರೇಟರ್ಸ್ | 3 | (ಒಬ್ಬರಿಗೆ 12851) ಒಟ್ಟು 38,553 | |
| | | | ಯುಜಿಡಿ ಕಾರ್ಮಿಕರ | 0 | - | - |
| | | | ಯುಜಿಡಿ ಸಹಾಯಕರ | 0 | - | - |
| | | ಪುರಸಭೆ ಭಾಲ್ಕಿ | ತ್ಯಾಜ್ಯ ಸಾಗಿಸುವ ವಾಹನ ಚಾಲಕರು | 3 | (ಒಬ್ಬರಿಗೆ 12265) ಒಟ್ಟು 36,795 | ಬೀದರ ಜಿಲ್ಲಾ ಕಾರ್ಮಿಕ ಸೇವೆಗಳ ವಿವಿದ್ದೋದೇಶ ಸಹಕಾರ ಸಂಘ ಜಿಲ್ಲಾಧಿಕಾರಿ ಕಛೇರಿ ಬೀದರ ದೂರವಾಣಿ ಸಂಖ್ಯೆ:08482-229659 |
| | | | ವಾಟರ್ ಮೆನ್ | 8 | (ಒಬ್ಬರಿಗೆ 11473) ಒಟ್ಟು 91,784 | |
| | | | ಡೇಟಾ ಎಂಟ್ರಿ ಆಪರೇಟರ್ಸ್ | 3 | (ಒಬ್ಬರಿಗೆ 12851) ಒಟ್ಟು 38,553 | |
| | | | ಯುಜಿಡಿ ಕಾರ್ಮಿಕರ | - | - | - |
| | | | ಯುಜಿಡಿ ಸಹಾಯಕರ | - | - | - |
| | | ಪುರಸಭೆ ಹುಮನಾಬಾದ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 0 | - | - |
| | | | ವಾಟರ್ ಮೆನ್ | 17 | (ಒಬ್ಬರಿಗೆ 11473) ಒಟ್ಟು 1,95,041 | ಬೀದರ ಜಿಲ್ಲಾ ಕಾರ್ಮಿಕ ಸೇವೆಗಳ ವಿವಿದ್ದೋದೇಶ ಸಹಕಾರ ಸಂಘ ಜಿಲ್ಲಾಧಿಕಾರಿ ಕಛೇರಿ ಬೀದರ ದೂರವಾಣಿ ಸಂಖ್ಯೆ:08482-229659 |
| | | | ಡೇಟಾ ಎಂಟ್ರಿ ಆಪರೇಟರ್ಸ್ | 0 | - | - |
| | | | ಯುಜಿಡಿ ಕಾರ್ಮಿಕರ | 0 | - | - |
| | | | ಯುಜಿಡಿ ಸಹಾಯಕರ | 0 | - | - |
| | | ಪುರಸಭೆ ಚಿಟಗುಪ್ಪಾ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | - | - | - |
| | | | ವಾಟರ್ ಮೆನ್ | 6 | (ಒಬ್ಬರಿಗೆ 11473) ಒಟ್ಟು 68,838 | ಬೀದರ ಜಿಲ್ಲಾ ಕಾರ್ಮಿಕ ಸೇವೆಗಳ ವಿವಿದ್ದೋದೇಶ ಸಹಕಾರ ಸಂಘ ಜಿಲ್ಲಾಧಿಕಾರಿ ಕಛೇರಿ ಬೀದರ ದೂರವಾಣಿ ಸಂಖ್ಯೆ:08482-229659 |
| | | | ಡೇಟಾ ಎಂಟ್ರಿ ಆಪರೇಟರ್ಸ್ | 2 | ಒಬ್ಬರಿಗೆ 12851 ಒಟ್ಟು 25,702 | |
| | | | ಯುಜಿಡಿ ಕಾರ್ಮಿಕರ | - | - | - |
| | | | ಯುಜಿಡಿ ಸಹಾಯಕರ | - | - | - |
| | | ಪುರಸಭೆ ಹಳ್ಳಿಖೇಡ(ಬಿ) | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | - | - | - |
| | | | ವಾಟರ್ ಮೆನ್ | - | - | - |
| | | | ಡೇಟಾ ಎಂಟ್ರಿ ಆಪರೇಟರ್ಸ್ | - | - | - |
| | | | ಯುಜಿಡಿ ಕಾರ್ಮಿಕರ | - | - | - |
| | | | ಯುಜಿಡಿ ಸಹಾಯಕರ | - | - | - |
| | | ಔರಾದ(ಬಾ) | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 2 | (ಒಬ್ಬರಿಗೆ 12073) ಒಟ್ಟು 24,146 | ಬೀದರ ಜಿಲ್ಲಾ ಕಾರ್ಮಿಕ ಸೇವೆಗಳ ವಿವಿದ್ದೋದೇಶ ಸಹಕಾರ ಸಂಘ ಜಿಲ್ಲಾಧಿಕಾರಿ ಕಛೇರಿ ಬೀದರ ದೂರವಾಣಿ ಸಂಖ್ಯೆ:08482-229659 |
| | | | ವಾಟರ್ ಮೆನ್ | 0 | - | - |
| | | | ಡೇಟಾ ಎಂಟ್ರಿ ಆಪರೇಟರ್ಸ್ | 0 | - | - |
| | | | ಯುಜಿಡಿ ಕಾರ್ಮಿಕರ | 0 | - | - |
| | | | ಯುಜಿಡಿ ಸಹಾಯಕರ | 0 | - | - |
| 30 | ಬಳ್ಳಾರಿ | ನಗರಸಭೆ, ಸಿರುಗುಪ್ಪ | ತ್ಯಾಜ್ಯ ಸಾಗಿಸುವ ವಾಹನ ಚಾಲಕರು | 1) ಡ್ರೈವರ್-14, 2)ಜೆ.ಸಿ.ಬಿ. ಆಪರೇಟರ್-01 | 1) ಡ್ರೈವರ್ಸ್- ರೂ.11211-00 14 ಜನರಿಗೆ= 156954.00 ರೂಗಳು 2) ಜೆಸಿಬಿ ಡ್ರೈವರ್ಸ್-ರೂ.11668-00 | M/s Intel Industrial solution & services 2nd floor, dudda durgamdm complex near durgamma temple Moka road, gandhi nagar bellary 08392-255500 |
| | | | ವಾಟರ್ ಮೆನ್ | - | - | - |
| | | | ಡೇಟಾ ಎಂಟ್ರಿ ಆಪರೇಟರ್ಸ್ | - | - | - |
| | | | ಯುಜಿಡಿ ಕಾರ್ಮಿಕರ | - | - | - |
| | | | ಯುಜಿಡಿ ಸಹಾಯಕರ | - | - | - |

| | | | | |
|---|---|---|---|---|
| ಪುರಸಭೆ ಕಂಪ್ಲಿ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 8 | 13078<br>8 ಜನರಿಗೆ= 104626.00 ರೂಗಳು | ರಂಗನಾಥ ಎಂಟರ್ ಪ್ರೈಸಸ್, ಬಳ್ಳಾರಿ<br>9886551031 |
| | ವಾಟರ್ ಮೆನ್ | 0 | - | - |
| | ಡೇಟಾ ಎಂಟ್ರಿ ಆಪರೇಟರ್ಸ್ | 2 | 14243<br>2 ಜನರಿಗೆ 28486.00 ರೂಗಳು | ರಂಗನಾಥ ಎಂಟರ್ ಪ್ರೈಸಸ್, ಬಳ್ಳಾರಿ<br>9886551031 |
| | ಯುಜಿಡಿ ಕಾರ್ಮಿಕರ | 0 | - | - |
| | ಯುಜಿಡಿ ಸಹಾಯಕರ | 0 | - | - |
| ಪುರಸಭೆ ಸಂಡೂರು | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 8 | 11600<br>8 ಜನರಿಗೆ = 92800.00 ರೂ | ಯೂನಿಕ್ ಸೆಕ್ಯೂರಿಟಿ ಸರ್ವಿಸಸ್, ಶಿವಮೊಗ್ಗ<br>9448337481 |
| | ವಾಟರ್ ಮೆನ್ | 0 | 0 | 0 |
| | ಡೇಟಾ ಎಂಟ್ರಿ ಆಪರೇಟರ್ಸ್ | 0 | 0 | 0 |
| | ಯುಜಿಡಿ ಕಾರ್ಮಿಕರ | 0 | 0 | 0 |
| | ಯುಜಿಡಿ ಸಹಾಯಕರ | 0 | 0 | 0 |
| ಪುರಸಭೆ ಕುರೇಕುಪ್ಪ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 6 | 13261.3<br>6 ಜನರಿಗೆ =79568.00 ರೂಗಳು | ಯುನಿಕ್ ಸೆಕ್ಯುರಿಟಿ ಸರ್ವೀಸಸ್, ಶಿವಮೊಗ್ಗ<br>9448337481 |
| | ವಾಟರ್ ಮೆನ್ | | | |
| | ಡೇಟಾ ಎಂಟ್ರಿ ಆಪರೇಟರ್ಸ್ | 2 | 21210<br>2 ಜನರಿಗೆ =42420.00 ರೂಗಳು | ಕಿಯೋನಿಕ್ಸ್ |
| | ಯುಜಿಡಿ ಕಾರ್ಮಿಕರ | - | - | - |
| | ಯುಜಿಡಿ ಸಹಾಯಕರ | - | - | - |
| ಪುರಸಭೆ ಕುರುಗೋಡು | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 8 | ಒಂದು ತಿಂಗಳಿಗೆ ಒಬ್ಬರಿಗೆ - 13,066/-<br>ಒಂದು ತಿಂಗಳಿಗೆ 08 ಜನರಿಗೆ - 1,04,528/- | ಅನಿತಾ ಎಂಟರ್ ಪ್ರೈಸರ್ಸ ಬಳ್ಳಾರಿ<br>ದೂ ಸಂ : 9916689740 |
| | ವಾಟರ್ ಮೆನ್ | - | - | - |
| | ಡೇಟಾ ಎಂಟ್ರಿ ಆಪರೇಟರ್ಸ್ | 2 | 12,606/-ಒಂದು ತಿಂಗಳಿಗೆ ಒಬ್ಬರಿಗೆ -12,606/-<br>ಒಂದು ತಿಂಗಳಿಗೆ 02 ಜನರಿಗೆ - 25,212- | ಶ್ರೀ ನಂದಿ ಮ್ಯಾನ್ ಪವರ್ ಏಜೆನ್ಸಿ ಕುರುಗೋಡು<br>ದೂ ಸಂ : 8792309561 |
| | ಯುಜಿಡಿ ಕಾರ್ಮಿಕರ | - | - | - |

| | | | | | | |
|---|---|---|---|---|---|---|
| | | | ಯುಜಿಡಿ ಸಹಾಯಕರ | – | – | – |
| | | ಪಟ್ಟಣ ಪಂಚಾಯಿತಿ, ತೆಕ್ಕಲಕೋಟೆ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 1 | 12220 | ಅನಿತಾ ಎಂಟರ್‌ಪ್ರೈಸಸ್, ಬಳ್ಳಾರಿ 9448094195 |
| | | | ವಾಟರ್ ಮೆನ್ | – | – | |
| | | | ಡೇಟಾ ಎಂಟ್ರಿ ಆಪರೇಟರ್ಸ್ | 1 | 14544 | ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು 9886142541 |
| | | | ಯುಜಿಡಿ ಕಾರ್ಮಿಕರ | – | – | – |
| | | | ಯುಜಿಡಿ ಸಹಾಯಕರ | – | – | – |
| | | ಕುಡತಿನಿ ಪಟ್ಟಣ ಪಂಚಾಯಿತಿ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 5 | ಒಬ್ಬರಿಗೆ 15474<br>5 ಜನರಿಗೆ 77370.00 ರೂಗಳು | ಅನಿತಾ ಎಂಟರ್ ಪ್ರೈಸಸ್ 9448094195 |
| | | | ವಾಟರ್ ಮೆನ್ | 8 | ಒಬ್ಬರಿಗೆ 15474.00<br>8 ಜನರಿಗೆ 123792.00 ರೂಗಳು | ಅನಿತಾ ಎಂಟರ್ ಪ್ರೈಸಸ್ 9448094195 |
| | | | ಡೇಟಾ ಎಂಟ್ರಿ ಆಪರೇಟರ್ಸ್ | 1 | 16400.00 | ಕಾಂಪ್ ಟೆಕ ಕಂಪೂಟರ್ಸ್ |
| | | | ಯುಜಿಡಿ ಕಾರ್ಮಿಕರ | – | – | – |
| | | | ಯುಜಿಡಿ ಸಹಾಯಕರ | – | – | – |
| 31 | ವಿಜಯನಗರ | ನಗರಸಭೆ, ಹೊಸಪೇಟೆ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 32 | ಒಬ್ಬರಿಗೆ 16457ರೂಗಳು<br>ಒಟ್ಟು 32 ಜನರಿಗೆ 526624.00 ರೂಗಳು | ಕಾಂಬ್ಯಾಟ್ ಸೆಕ್ಯೂರಿಟಿ ಫೋರ್ಸ್ ಅಂಡ್ ಅಲೈಡ್ ಸರ್ವೀಸ್, ಹುಬ್ಬಳ್ಳಿ-8073815691<br>ತನುಜಾ ಎಲೆಕ್ಟ್ರಿಕಲ್ಸ್ ಗದಗ -9743736012 |
| | | | ವಾಟರ್ ಮೆನ್ | 24 | ಒಬ್ಬರಿಗೆ 12605 ರೂಗಳು<br>ಒಟ್ಟು 24 ಜನರಿಗೆ 302520.00 ರೂಗಳು | ಕಾಂಬ್ಯಾಟ್ ಸೆಕ್ಯೂರಿಟಿ ಫೋರ್ಸ್ ಅಂಡ್ ಅಲೈಡ್ ಸರ್ವೀಸ್, ಹುಬ್ಬಳ್ಳಿ-8073815691<br>ತನುಜಾ ಎಲೆಕ್ಟ್ರಿಕಲ್ಸ್ ಗದಗ -9743736012 |
| | | | ಡೇಟಾ ಎಂಟ್ರಿ ಆಪರೇಟರ್ಸ್ | 4 | ಒಬ್ಬರಿಗೆ ರೂ. 17111<br>ಒಟ್ಟು 4 ರಿಗೆ 68444.00 ರೂಗಳು | ಕಾಂಬ್ಯಾಟ್ ಸೆಕ್ಯೂರಿಟಿ ಫೋರ್ಸ್ ಅಂಡ್ ಅಲೈಡ್ ಸರ್ವೀಸ್, ಹುಬ್ಬಳ್ಳಿ-8073815691<br>ತನುಜಾ ಎಲೆಕ್ಟ್ರಿಕಲ್ಸ್ ಗದಗ -9743736012 |
| | | | ಯುಜಿಡಿ ಕಾರ್ಮಿಕರ | – | – | – |
| | | | ಯುಜಿಡಿ ಸಹಾಯಕರ | – | – | – |
| | | ಪುರಸಭೆ ಹೂವಿನಹಡಗಲಿ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 8 | ಒಬ್ಬರಿಗೆ 13507 ರೂಗಳು<br>ಒಟ್ಟು 08 ಜನರಿಗೆ 108056.00 ರೂಗಳು | ಸಂತೋಷ, ಶಿವಮೊಗ್ಗ 9844076771 |
| | | | ವಾಟರ್ ಮೆನ್ | – | – | – |
| | | | ಡೇಟಾ ಎಂಟ್ರಿ ಆಪರೇಟರ್ಸ್ | 2 | ಒಬ್ಬರಿಗೆ ರೂ. 14727<br>ಒಟ್ಟು 2 ರಿಗೆ 29454.00 ರೂಗಳು | Keonics,Bangalore Ph No: 080-22225645 |
| | | | ಯುಜಿಡಿ ಕಾರ್ಮಿಕರ | – | – | – |
| | | | ತ್ಯಾಜ್ಯ ಸಾಗಿಸುವ ವಾಹನಕ್ಕೆ ಸಹಾಯಕರು | 32 | ಒಬ್ಬರಿಗೆ 18759 ರೂಗಳು<br>ಒಟ್ಟು 32 ಜನರಿಗೆ 600288.00 ರೂಗಳು | ಕಾಂಬ್ಯಾಟ್ ಸೆಕ್ಯೂರಿಟಿ ಫೋರ್ಸ್ ಅಂಡ್ ಅಲೈಡ್ ಸರ್ವೀಸ್, ಹುಬ್ಬಳ್ಳಿ-8073815691<br>ತನುಜಾ ಎಲೆಕ್ಟ್ರಿಕಲ್ಸ್ ಗದಗ -9743736012 |
| | | ಪುರಸಭೆ ಹಗರಿಬೊಮ್ಮನಹಳ್ಳಿ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 10 | ಒಬ್ಬರಿಗೆ ರೂ.14749.5<br>ಒಟ್ಟು 10 ಜನರಿಗೆ ರೂ.147495/- | Om Sai Security Service and man power agency Ballari Ph nO :08392241401 |
| | | | ವಾಟರ್ ಮೆನ್ | – | – | – |
| | | | ಡೇಟಾ ಎಂಟ್ರಿ ಆಪರೇಟರ್ಸ್ | – | – | – |

| | | | | | | |
|---|---|---|---|---|---|---|
| | | | ಯುಜಿಡಿ ಕಾರ್ಮಿಕರ | - | - | - |
| | | | ಯುಜಿಡಿ ಸಹಾಯಕರ | - | - | - |
| | | ಪುರಸಭೆ. ಹರಪನಹಳ್ಳಿ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 10 | ಒಬ್ಬರಿಗೆ ರೂ.13078 ಒಟ್ಟು 10 ಜನರಿಗೆ 130780.00 | ಶ್ರೀ ಭವಾನಿ ಏಜೆನ್ಸಿ ರಾಣೇಬೆನ್ನೂರ್-583131 |
| | | | ವಾಟರ್ ಮೆನ್ | 0 | 0 | |
| | | | ಡೇಟಾ ಎಂಟ್ರಿ ಆಪರೇಟರ್ಸ್ | 2 | ಒಬ್ಬರಿಗೆ ರೂ.14299 2 ಜನರಿಗೆ ರೂ.28598 | |
| | | | ಯುಜಿಡಿ ಕಾರ್ಮಿಕರ | 0 | 0 | |
| | | | ಯುಜಿಡಿ ಸಹಾಯಕರ | 0 | 0 | |
| | | ಪಟ್ಟಣ ಪಂಚಾಯಿತಿ, ಮರಿಯಮ್ಮನಹಳ್ಳಿ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 0 | 0 | 0 |
| | | | ವಾಟರ್ ಮೆನ್ | 0 | 0 | 0 |
| | | | ಡೇಟಾ ಎಂಟ್ರಿ ಆಪರೇಟರ್ಸ್ | 0 | 0 | 0 |
| | | | ಯುಜಿಡಿ ಕಾರ್ಮಿಕರ | 0 | 0 | 0 |
| | | | ಯುಜಿಡಿ ಸಹಾಯಕರ | 0 | 0 | 0 |
| | | ಪಟ್ಟಣ ಪಂಚಾಯಿತಿ, ಕಮಲಾಪುರ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 6 | ಒಬ್ಬರಿಗೆ ರೂ.12638 ಒಟ್ಟು 6 ಜನರಿಗೆ ರೂ.75828.00 | Anitha Enterprises, Ballari 9448094195 |
| | | | ಚಾಲಕ ಕಂ ಆಪರೇಟರ್ | 1 | 13132 | Anitha Enterprises, Ballari 9448094195 |
| | | | ವಾಟರ್ ಮೆನ್ | 0 | 0 | - |
| | | | ಡೇಟಾ ಎಂಟ್ರಿ ಆಪರೇಟರ್ಸ್ | 1 | 20949 | Karnataka Electronics Development Corporation limited Bangalore (Keonics) Mobile No.91-80-22225645 |
| | | | ಯುಜಿಡಿ ಕಾರ್ಮಿಕರ | 0 | 0 | - |
| | | | ಯುಜಿಡಿ ಸಹಾಯಕರ | 0 | 0 | - |
| | | ಕೊಟ್ಟೂರು ಪಟ್ಟಣ ಪಂಚಾಯಿತಿ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 10 | ಒಟ್ಟರಿಗೆ ರೂ.13,066.00 ಒಟ್ಟು 10 ಜನರಿಗೆ ರೂ.130660.00 | Sri Mallikarjuna Enterprises Anurag Layout, Mahadevapura @ (Po) Outer Ring Road, Whitefield Road, Bangalore-560048 mob:9902918007 |
| | | | ವಾಟರ್ ಮೆನ್ | 0 | - | - |
| | | | ಡೇಟಾ ಎಂಟ್ರಿ ಆಪರೇಟರ್ಸ್ | 1 | 14,544.00 | Sri Mallikarjuna Enterprises Anurag Layout, Mahadevapura @ (Po) Outer Ring Road, Whitefield Road, Bangalore-560048 mob:9902918007 |
| | | | ಯುಜಿಡಿ ಕಾರ್ಮಿಕರ | 0 | 0 | - |
| | | | ಯುಜಿಡಿ ಸಹಾಯಕರ | 0 | 0 | - |
| | | ಕೂಡ್ಲಿಗಿ ಪಟ್ಟಣ ಪಂಚಾಯಿತಿ | ತ್ಯಾಜ್ಯ ಸಾಗಿಸುವ ವಾಹನ ಚಾಲಕರ | 0 | 0 | ಕೂಡ್ಲಿಗಿ ಪಟ್ಟಣ ಪಂಚಾಯತಿಯಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ಯಾರು ಕೆಲಸ ನಿರ್ವಹಿಸುತ್ತಿಲ್ಲ. |
| | | | ವಾಟರ್ ಮೆನ್ | 0 | 0 | |
| | | | ಡೇಟಾ ಎಂಟ್ರಿ ಆಪರೇಟರ್ಸ್ | 0 | 0 | |
| | | | ಯುಜಿಡಿ ಕಾರ್ಮಿಕರ | 0 | 0 | |
| | | | ಯುಜಿಡಿ ಸಹಾಯಕರ | 0 | 0 | |

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 638
ಸದಸ್ಯರ ಹೆಸರು : ಶ್ರೀ ರಾಜೇಗೌಡ ಟಿ.ಡಿ. (ಶೃಂಗೇರಿ)
ಉತ್ತರಿಸಬೇಕಾದ ದಿನಾಂಕ : 18.02.2022
ಉತ್ತರಿಸುವವರು : ಪೌರಾಡಳಿತ, ಸಣ್ಣ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ಯಮಗಳ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಆಯವ್ಯಯದಲ್ಲಿ ಘೋಷಿಸಿದಂತೆ ಯಾವ ಯಾವ ಜಿಲ್ಲೆಗಳಲ್ಲಿ ಬೆಳೆ ಆಧಾರಿತ ಕೈಗಾರಿಕಾ ಪಾರ್ಕ್ ನಿರ್ಮಾಣ ಮಾಡಲು ಉದ್ದೇಶಿಸಲಾಗಿದೆ; (ಜಿಲ್ಲಾವಾರು ಮಾಹಿತಿ ನೀಡುವುದು) | 2020-21ನೇ ಸಾಲಿನ ಆಯವ್ಯಯದಲ್ಲಿ ತುಮಕೂರು ಜಿಲ್ಲೆಯ ತಿಪಟೂರು ತಾಲ್ಲೂಕಿನಲ್ಲಿ ತೆಂಗು ಆಧಾರಿತ ಕೈಗಾರಿಕಾ ಪಾರ್ಕ್ ನಿರ್ಮಾಣ ಮಾಡಲಾಗುವುದು ಎಂದು ಘೋಷಿಸಲಾಗಿದೆ. |
| ಆ) | ಹಾಗಿದ್ದಲ್ಲಿ, ಚಿಕ್ಕಮಗಳೂರು ಜಿಲ್ಲೆಯ ಅಡಿಕೆ, ಕಾಫಿ, ಅಡಿಕೆ, ಮೆಣಸು, ಏಲಕ್ಕಿ ಬೆಳೆಗಾರರಿಗೆ ಸಹಾಯವಾಗಲು ಬೆಳೆ ಆಧಾರಿತ ಕೈಗಾರಿಕಾ ಪಾರ್ಕ್ ಸ್ಥಾಪಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಇಲ್ಲ. |
| ಇ) | ಇದ್ದಲ್ಲಿ, ಯಾವ ಕೈಗಾರಿಕಾ ಪಾರ್ಕ್ ಸ್ಥಾಪನೆಗೆ ಉದ್ದೇಶಿಸಲಾಗಿದೆ; | ಅನ್ವಯಿಸುವುದಿಲ್ಲ. |
| ಈ) | ಯಾವ ಕಾಲಮಿತಿಯೊಳಗೆ ಕೈಗಾರಿಕಾ ಪಾರ್ಕ್ ಸ್ಥಾಪನೆ ಮಾಡಲಾಗುತ್ತದೆ? (ವಿವರ ನೀಡುವುದು) | 1. ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತ ರವರಿಂದ ಸದರಿ ಯೋಜನೆ ಕಾರ್ಯಗತಗೊಳಿಸಲು ಅವಶ್ಯವಿರುವ ಬೇಡಿಕೆ ಸಮೀಕ್ಷೆಯನ್ನು ನಡೆಸಲಾಗಿದೆ.<br>2. ತೆಂಗು ಆಧಾರಿತ ಕೈಗಾರಿಕಾ ಪಾರ್ಕ್ ಸ್ಥಾಪನೆಗೆ ಪ್ರಸ್ತಾಪಿತ ಭೂಮಿಯು ರೇಷ್ಮೆ ಇಲಾಖೆಯ ಒಡೆತನದಲ್ಲಿದ್ದು, ಭೂಮಿ ಹಸ್ತಾಂತರಕ್ಕೆ ಕ್ರಮವಹಿಸಲಾಗುತ್ತಿದೆ. |

ಸಿಐ 45 ಸಿಎಸ್‌ಸಿ 2022

(ಎನ್. ನಾಗರಾಜು (ಎಂ.ಟಿ.ಬಿ))
ಪೌರಾಡಳಿತ ಮತ್ತು ಸಣ್ಣ ಕೈಗಾರಿಕೆ
ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು.

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 639
ಸದಸ್ಯರ ಹೆಸರು : ಶ್ರೀ ಪುಟ್ಟರಂಗಶೆಟ್ಟಿ ಸಿ. (ಚಾಮರಾಜನಗರ)
ಉತ್ತರಿಸುವ ದಿನಾಂಕ : 18-02-2022
ಉತ್ತರಿಸುವ ಸಚಿವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಇಲಾಖಾ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಅಂಗನವಾಡಿ ಕಾರ್ಯಕರ್ತೆಯರ ಮತ್ತು ಸಹಾಯಕರ ಹುದ್ದೆಗಾಗಿ ಅರ್ಜಿಯನ್ನು ಸಲ್ಲಿಸಲು ಇರುವ ಮಾನದಂಡಗಳೇನು; (ಸಂಪೂರ್ಣ ವಿವರ ನೀಡುವುದು) | ಅಂಗನವಾಡಿ ಕಾರ್ಯಕರ್ತೆಯರ ಮತ್ತು ಸಹಾಯಕಿಯರ ಹುದ್ದೆಯನ್ನು ಆಯ್ಕೆ ಮಾಡಲು ಈ ಕೆಳಕಂಡ ಮಾನದಂಡಗಳನ್ನು ನಿಗದಿಪಡಿಸಲಾಗಿದೆ.<br>I :- 1) **ವಯೋಮಿತಿ:-**<br>ಅಂಗವನಾಡಿ ಕಾರ್ಯಕರ್ತೆ/ಸಹಾಯಕಿಯರ ಹುದ್ದೆಗೆ ಅರ್ಜಿ ಸಲ್ಲಿಸಲು 18- 35 ವರ್ಷ ವಯೋಮಿತಿಯೊಳಗಿರಬೇಕು.<br><br>2) **ಸ್ಥಳೀಯತೆ** :-<br>ಅಂಗನವಾಡಿ ಕಾರ್ಯಕರ್ತೆ/ ಸಹಾಯಕಿಯರ ಆಯ್ಕೆಗೆ ಸ್ಥಳೀಯರಾಗಿರಬೇಕು. ತಹಸೀಲ್ದಾರ್/ ಉಪ ತಹಸೀಲ್ದಾರ್ ರಿಂದ ಪಡೆದ ಮೂರು ವರ್ಷದೊಳಗಿನ ವಾಸಸ್ಥಳ ದೃಢೀಕರಣ ಪತ್ರ ಸಲ್ಲಿಸಬೇಕು.<br><br>3) **ವಿದ್ಯಾರ್ಹತೆ:**<br><br>i) **ಅಂಗನವಾಡಿ ಕಾರ್ಯಕರ್ತೆಯರು:-**<br>ಎಸ್.ಎಸ್.ಎಲ್.ಸಿ ಉತ್ತೀರ್ಣರಾಗಿರಬೇಕು. ಹೆಚ್ಚಿನ ವಿದ್ಯಾರ್ಹತೆಯನ್ನು ಆಯ್ಕೆಗೆ ಆದ್ಯತೆ ಪರಿಗಣಿಸುವಂತಿಲ್ಲ.<br><br>ಅ) ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಮುಕ್ತ ಶಾಲೆ/ಮುಕ್ತ ವಿದ್ಯಾಲಯಗಳಲ್ಲಿ ಎಸ್.ಎಸ್.ಎಲ್.ಸಿ ತೇರ್ಗಡೆ ಹೊಂದಿದ ಅಭ್ಯರ್ಥಿಗಳು ಪ್ರಥಮ/ದ್ವಿತೀಯ ಭಾಷೆಯಾಗಿ ಕನ್ನಡ ಹಾಗೂ ಸಾಮನ್ಯ ಗಣಿತ ಮತ್ತು ಸಮಾಜಶಾಸ್ತ್ರ/ಸಮಾಜ ವಿಜ್ಞಾನ ವಿಷಯಗಳನ್ನು ಕಡ್ಡಾಯವಾಗಿ ವ್ಯಾಸಂಗ ಮಾಡಿದ್ದು, ಪ್ರಮಾಣ ಪತ್ರ/ಅಂಕಪಟ್ಟಿಯು ಗರಿಷ್ಠ 625, ಕನಿಷ್ಠ 219 ಅಂಕಗಳನ್ನು ಹೊಂದಿದಲ್ಲಿ, ಅಂತಹ ಅಭ್ಯರ್ಥಿಗಳನ್ನು ಪರಿಗಣಿಸತಕ್ಕದ್ದು.<br><br>ಆ) ಅಭ್ಯರ್ಥಿಗಳು ಯಾವುದೇ ಭಾಷಾ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ್ದರೂ ಹಾಗೂ ಯಾವುದೇ ರಾಜ್ಯದಲ್ಲಿ ವ್ಯಾಸಂಗ ಮಾಡಿದ್ದರೂ ಸಹ ಅವರು ಕನ್ನಡ ಭಾಷೆಯನ್ನು ಪ್ರಥಮ/ದ್ವಿತೀಯ ಭಾಷೆಯಾಗಿ ವ್ಯಾಸಂಗ ಮಾಡಿರಬೇಕು. |

| | | |
|---|---|---|
| | | ii) ಅಂಗನವಾಡಿ ಸಹಾಯಕಿ:–<br><br>ಅ) ಕನಿಷ್ಠ 4 ನೇ ತರಗತಿ ತೇರ್ಗಡೆ, ಗರಿಷ್ಠ 9ನೇ ತರಗತಿ ತೇರ್ಗಡೆ. ಇದರಲ್ಲಿ ಹೆಚ್ಚಿನ ವಿದ್ಯಾರ್ಹತೆಯುಳ್ಳವರನ್ನು ಆಯ್ಕೆ ಮಾಡಬೇಕು. 9ನೇ ತರಗತಿಗಿಂತ ಹೆಚ್ಚಿನ ವಿದ್ಯಾರ್ಹತೆಯನ್ನು ಆಯ್ಕೆಗೆ ಆದ್ಯತೆ ಪರಿಗಣಿಸುವಂತಿಲ್ಲ.<br><br>ಆ) ಒಂದೇ ವಿದ್ಯಾರ್ಹತೆಯುಳ್ಳ ಒಂದಕ್ಕಿಂತ ಹೆಚ್ಚು ಅರ್ಜಿ ಬಂದಿದ್ದಲ್ಲಿ ಹೆಚ್ಚು ಅಂಕಗಳಿಸಿದವರನ್ನು ಆಯ್ಕೆ ಮಾಡಬೇಕು.<br><br>III ಆಯ್ಕೆ ಆದ್ಯತೆ:–<br>1. ಆಸಿಡ್ ದಾಳಿಗೊಳಗಾದವರು<br>2. ಇಲಾಖೆಯ ಸಂಸ್ಥೆಗಳ ನಿವಾಸಿಗಳು<br>3. ವಿಧವೆಯರು<br>4. ಅಂಗವಿಕಲರು<br><br>ಸಂಪೂರ್ಣ ವಿವರವುಳ್ಳ ಸರ್ಕಾರದ ಆದೇಶ ಸಂಖ್ಯೆ: ಮಮಇ 303 ಐಸಿಡಿ 2017 ದಿನಾಂಕ: 23–09–2017, ತಿದ್ದುಪಡಿ ಆದೇಶ ದಿನಾಂಕ:19–01–2019 ಮತ್ತು ಆದೇಶ ಸಂಖ್ಯೆ: ಮಮಇ 308 ಐಸಿಡಿ 2018 ದಿನಾಂಕ:02–02–2019 ತಿದ್ದುಪಡಿ ಆದೇಶ ದಿನಾಂಕ:15–06–2020, ಆದೇಶ ಸಂಖ್ಯೆ: ಮಮಇ 152 ಐಸಿಡಿ 2021 ದಿನಾಂಕ:01–06–2021 ಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |
| ಆ | ಹಾಗಿದಲ್ಲಿ, ಎಷ್ಟು ವರ್ಷಗಳ ಅವಧಿಯ ವಾಸಸ್ಥಳ ದೃಢೀಕರಣ ಪತ್ರವನ್ನು ಸಲ್ಲಿಸಬೇಕು; | ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: ಮಮಇ: 152 ಐಸಿಡಿ: 2021. ದಿನಾಂಕ: 01–06–2021 ರಂತೆ ತಹಸೀಲ್ದಾರ್/ ಉಪ ತಹಸೀಲ್ದಾರವರಿಂದ ಪಡೆದ ಮೂರು ವರ್ಷದೊಳಗಿನ ವಾಸಸ್ಥಳ ದೃಢೀಕರಣ ಪತ್ರ ಸಲ್ಲಿಸಬೇಕು. |
| ಇ | ವಾಸಸ್ಥಳ ದೃಢೀಕರಣ ಪತ್ರ ಸಲ್ಲಿಸಲು ಇಡೀ ರಾಜ್ಯಕ್ಕೆ ಒಂದೇ ಮಾನದಂಡವನ್ನು ಅನುಸರಿಸಲಾಗಿದೆಯೇ; | ಹೌದು, ರಾಜ್ಯದಲ್ಲಿ ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕಿಯರ ಆಯ್ಕೆ ಸಂಬಂಧ ವಾಸಸ್ಥಳ ದೃಢೀಕರಣ ಪತ್ರವನ್ನು ಸಲ್ಲಿಸಲು ಒಂದೇ ಮಾನದಂಡ ಇರುತ್ತದೆ. |
| ಈ | ಹಾಗಿದ್ದಲ್ಲಿ, ಮಾನದಂಡಗಳು ಜಿಲ್ಲಾವಾರು / ಪ್ರಾಂತ್ಯವಾರು ವ್ಯತ್ಯಾಸ ಇದೆಯೇ ? (ವಿವರ ನೀಡುವುದು.) | ಮಾನದಂಡಗಳಲ್ಲಿ ವ್ಯತ್ಯಾಸವಿರುವುದಿಲ್ಲ. |

ಸಂ: ಮಮಇ 32 ಐಸಿಡಿ 2022

Halappa BA

(ಆಚಾರ ಹಾಲಪ್ಪ ಬಸಪ್ಪ)
ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು
ಮಕ್ಕಳ ಅಭಿವೃದ್ಧಿ ವಿಕಲಚೇತನರ ಹಾಗೂ
ಹಿರಿಯ ನಾಗರೀಕರ ಸಬಲೀಕರಣ ಸಚಿವರು.

## ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ:** ಅಂಗನವಾಡಿ ಕಾರ್ಯಕರ್ತೆಯರ/ಸಹಾಯಕಿಯರ ಆಯ್ಕೆ ಮಾಡಲು ಹೊರಡಿಸಿದ ಮಾರ್ಗಸೂಚಿಗಳನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ ಮಮಇ: 237 ಐಸಿಡಿ 2012 ದಿನಾಂಕ 15.06.2012
2) ಸರ್ಕಾರದ ಆದೇಶ ಸಂಖ್ಯೆ ಮಮಇ: 89 ಐಸಿಡಿ, ದಿನಾಂಕ 19.04.2014
3) ಸರ್ಕಾರದ ತಿದ್ದುಪಡಿ ಆದೇಶ ಮಮಇ 218 ಐಸಿಡಿ 2015 ದಿನಾಂಕ 02.07.2016
4) ಸರ್ಕಾರದ ಸೇರ್ಪಡೆ ಆದೇಶ ಸಂಖ್ಯೆ ಮಮಇ 158 ಐಸಿಡಿ 2017 ದಿ: 19.04.2017
5) ಸರ್ಕಾರದ ತಿದ್ದುಪಡಿ ಆದೇಶ ಮಮಇ 235 ಐಸಿಡಿ 2017 ದಿನಾಂಕ 02.08.2017
6) ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಏಕ ಕಡತ ಸಂಖ್ಯೆ: ಡಿಡಬ್ಲ್ಯುಸಿ/ಐಸಿಡಿ/ಎಎನ್‌ಜಿ-1/79/2017-18, ದಿನಾಂಕ 06.09.2017.

**ಪ್ರಸ್ತಾವನೆ:**

ರಾಜ್ಯದಲ್ಲಿನ ಅಂಗನವಾಡಿ ಕೇಂದ್ರಗಳಿಗೆ ಅಂಗನವಾಡಿ ಕಾರ್ಯಕರ್ತೆಯರ / ಸಹಾಯಕಿಯರನ್ನು ಆಯ್ಕೆ ಮಾಡಲು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಆಯ್ಕೆ ಸಮಿತಿಯನ್ನು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ 15.06.2012ರ ಆದೇಶದಲ್ಲಿ ರಚಿಸಿ ಮಾರ್ಗಸೂಚಿಗಳನ್ನು ಹೊರಡಿಸಲಾಗಿತ್ತು ಹಾಗು ಸದರಿ ಮಾರ್ಗ ಸೂಚಿಗಳನ್ನು ಉಲ್ಲೇಖ (2) ರಲ್ಲಿ ಓದಲಾದ ದಿನಾಂಕ 19.04.2014 ರ ಆದೇಶದಲ್ಲಿ ಪರಿಷ್ಕರಿಸಲಾಗಿತ್ತು.

ಅಂಗನವಾಡಿ ಕಾರ್ಯಕರ್ತೆಯರ / ಸಹಾಯಕಿಯರನ್ನು ಆಯ್ಕೆ ಮಾಡಲು ಹೊರಡಿಸಲಾದ ಆದೇಶಗಳಿಗೆ ಕ್ರಮ ಸಂಖ್ಯೆ (3) ರಿಂದ (6) ರಲ್ಲಿ ಓದಲಾದ ಆದೇಶಗಳಲ್ಲಿ ಕೆಲವು ಸೇರ್ಪಡೆ ಮತ್ತು ತಿದ್ದುಪಡಿಗಳನ್ನು ಮಾಡಿರುವುದರಿಂದ ಅವುಗಳನ್ನು ಅಳವಡಿಸಿಕೊಂಡು ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕಿಯರ ನೇಮಕಾತಿಯನ್ನು ಆನ್‌ಲೈನ್ ಮುಖಾಂತರ ಮಾಡಲು ಅನುಕೂಲವಾಗುವಂತೆ ಮಾರ್ಗಸೂಚಿಗಳನ್ನು ಪರಿಷ್ಕರಿಸಲು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರು ಮೇಲೆ ಓದಲಾದ ಏಕ ಕಡತದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

### ಸರ್ಕಾರದ ಆದೇಶ ಸಂಖ್ಯೆ: ಮಮಇ 303 ಐಸಿಡಿ 2017, ದಿನಾಂಕ: 23.09.2017

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದಲ್ಲಿನ ಅಂಗನವಾಡಿ ಕೇಂದ್ರಗಳಿಗೆ ಅಂಗನವಾಡಿ ಕಾರ್ಯಕರ್ತೆಯರ / ಸಹಾಯಕಿಯರನ್ನು ಆಯ್ಕೆಯನ್ನು ಆನ್‌ಲೈನ್ ಮುಖಾಂತರ ಮಾಡಲು

ಹಾಗೂ ಮೇಲೆ ನಮೂದಿಸಿರುವ ತಿದ್ದುಪಡಿಗಳನ್ನು ಅಳವಡಿಸಿಕೊಂಡು ದಿನಾಂಕ 19.04.2014ರ ಆದೇಶದಲ್ಲಿನ ಮಾರ್ಗಸೂಚಿಗಳನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ಪರಿಷ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

(ಸಂಧ್ಯಾ ಎಲ್. ನಾಯಕ್)
ಸರ್ಕಾರದ ಅಧೀನ ಕಾರ್ಯದರ್ಶಿ-1
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರೀಕರ ಸಬಲೀಕರಣ ಇಲಾಖೆ.

ಸಂಕಲನಕಾರರು, ಕರ್ನಾಟಕ ರಾಜ್ಯ ಪತ್ರ, ಬೆಂಗಳೂರು – ಇವರಿಗೆ ಮುಂದಿನ ಸಂಚಿಕೆಯಲ್ಲಿ ಪ್ರಕಟಿಸುವಂತೆ ಹಾಗೂ 500 ಪ್ರತಿಗಳನ್ನು ಒದಗಿಸುವಂತೆ ಕೋರಿದೆ

**ಇವರಿಗೆ:-**

1. ಪ್ರಧಾನ ಮಹಾಲೇಖಪಾಲರು (ಎ & ಇ), ಕರ್ನಾಟಕ, ಪಾರ್ಕ್‌ಹೌಸ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ:5329, ಬೆಂಗಳೂರು-560 001.
2. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು.
3. ಎಲ್ಲಾ ಜಿಲ್ಲಾಧಿಕಾರಿಗಳು ಮತ್ತು ಎಲ್ಲಾ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು
4. ಎಲ್ಲಾ ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಹಣಾಧಿಕಾರಿಗಳು
5. ಎಲ್ಲಾ ಆಯ್ಕೆ ಸಮಿತಿಯ ಸದಸ್ಯರು
6. ಎಲ್ಲಾ ಜಿಲ್ಲಾ ಉಪನಿರ್ದೇಶಕರುಗಳು ಮತ್ತು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ
7. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

(ಕ್ರಮ ಸಂಖ್ಯೆ: 3 ರಿಂದ 6 ನಿರ್ದೇಶನಾಲಯದ ಮುಖಾಂತರ)

**ಪ್ರತಿಯನ್ನು ಮಾಹಿತಿಗಾಗಿ:**

1. ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರ ಆಪ್ತಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಆಪ್ತಕಾರ್ಯದರ್ಶಿ.

53

ಸರ್ಕಾರಿ ಆದೇಶ ಸಂಖ್ಯೆ: ಮಮಇ 303 ಐಸಿಡಿ 2017, ದಿನಾಂಕ:23.09.2017ಕ್ಕೆ ಅನುಬಂಧ

## ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರನ್ನು ಆಯ್ಕೆ ಮಾಡಲು ಮಾರ್ಗಸೂಚಿಗಳು ಮತ್ತು ಅರ್ಹತೆಯ ಮಾನದಂಡಗಳು.

### I ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಆಯ್ಕೆಗೆ ಅರ್ಹತೆ ಮಾನದಂಡಗಳು:-

1) **ವಯೋಮಿತಿ:**
ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಹುದ್ದೆಗೆ ಅರ್ಜಿ ಸಲ್ಲಿಸಲು 18-35 ವರ್ಷ ವಯೋಮಿತಿಯೊಳಗಿರಬೇಕು.

2) **ಸ್ಥಳೀಯತೆ:**
ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಆಯ್ಕೆಗೆ ಸ್ಥಳೀಯರಾಗಿರಬೇಕು.
ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ದಿನಾಂಕದ ಒಂದು(1) ವರ್ಷದೊಳಗೆ ಸಂಬಂಧಪಟ್ಟ ತಹಶೀಲ್ದಾರರಿಂದ / ಉಪ ತಹಶೀಲ್ದಾರರಿಂದ ಪಡೆದ ವಾಸಸ್ಥಳ ದೃಢೀಕರಣ ಪತ್ರವನ್ನು ಕಡ್ಡಾಯವಾಗಿ ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು.

3) **ವಿದ್ಯಾರ್ಹತೆ:**

i) **ಅಂಗನವಾಡಿ ಕಾರ್ಯಕರ್ತೆ:** ಎಸ್.ಎಸ್.ಎಲ್.ಸಿ. ತೇರ್ಗಡೆ. ಹೆಚ್ಚಿನ ವಿದ್ಯಾರ್ಹತೆಯನ್ನು ಆಯ್ಕೆಗೆ ಪರಿಗಣಿಸುವಂತಿಲ್ಲ.

ಅ) ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಮುಕ್ತ ಶಾಲೆ / ಮುಕ್ತ ವಿದ್ಯಾಲಯಗಳಲ್ಲಿ ಎಸ್.ಎಸ್.ಎಲ್.ಸಿ ತೇರ್ಗಡೆ ಹೊಂದಿದ ಅಭ್ಯರ್ಥಿಗಳು ಪ್ರಥಮ / ದ್ವಿತೀಯ ಭಾಷೆಯಾಗಿ ಕನ್ನಡ ಹಾಗೂ ಸಾಮಾನ್ಯ ಗಣಿತ ಮತ್ತು ಸಮಾಜಶಾಸ್ತ್ರ / ಸಮಾಜ ವಿಜ್ಞಾನ ವಿಷಯಗಳನ್ನು ಕಡ್ಡಾಯವಾಗಿ ವ್ಯಾಸಂಗ ಮಾಡಿದ್ದು, ಪ್ರಮಾಣ ಪತ್ರ / ಅಂಕಪಟ್ಟಿಯು ಗರಿಷ್ಠ 625, ಕನಿಷ್ಠ 219 ಅಂಕಗಳನ್ನು ಹೊಂದಿದಲ್ಲಿ, ಅಂತಹ ಅಭ್ಯರ್ಥಿಗಳನ್ನು ಪರಿಗಣಿಸತಕ್ಕದ್ದು.

ಆ) ಬೇರೆ ರಾಜ್ಯಗಳ ಶಾಲೆಗಳಲ್ಲಿ ವ್ಯಾಸಂಗ ಮಾಡಿದ್ದು, ಕನ್ನಡವನ್ನು ಪ್ರಥಮ / ದ್ವಿತೀಯ ಭಾಷೆಯಾಗಿ ಅಭ್ಯಾಸ ಮಾಡಿದ್ದರೂ, ಎಸ್.ಎಸ್.ಎಲ್.ಸಿ ಪರೀಕ್ಷೆಗೆ ಆ ರಾಜ್ಯದಲ್ಲಿ ನಿಗದಿಪಡಿಸಿದ ಗರಿಷ್ಠ ಹಾಗೂ ಕನಿಷ್ಠ ಅಂಕಗಳು ಹಾಗೂ ಕರ್ನಾಟಕ ರಾಜ್ಯದಲ್ಲಿ ನಿಗದಿಪಡಿಸಿದ ಗರಿಷ್ಠ ಹಾಗೂ ಕನಿಷ್ಠ ಅಂಕಗಳಲ್ಲಿ ವ್ಯತ್ಯಾಸವಿದ್ದಲ್ಲಿ, ಕರ್ನಾಟಕದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳನ್ನು ಮಾತ್ರ ಪರಿಗಣಿಸತಕ್ಕದ್ದು.

ಇ) ಅಂಗನವಾಡಿ ಕಾರ್ಯಕರ್ತೆಯರು ಶಾಲಾ ಪೂರ್ವ ಶಿಕ್ಷಣವನ್ನು ಹಾಗೂ ದಾಖಲೆಗಳನ್ನು ಕನ್ನಡದಲ್ಲಿ ನಿರ್ವಹಿಸಬೇಕಾಗಿರುವುದರಿಂದ ಅಭ್ಯರ್ಥಿಗಳು ಯಾವುದೇ ಭಾಷಾ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ್ದರೂ ಹಾಗೂ ಯಾವುದೇ ರಾಜ್ಯದಲ್ಲಿ ವ್ಯಾಸಂಗ ಮಾಡಿದ್ದರೂ ಸಹ ಅವರು ಕನ್ನಡ ಭಾಷೆಯನ್ನು ಪ್ರಥಮ / ದ್ವಿತೀಯ ಭಾಷೆಯಾಗಿ ವ್ಯಾಸಂಗ ಮಾಡಿರಬೇಕು ಹಾಗೂ ಮಾತೃಭಾಷೆ ಕನ್ನಡವಲ್ಲದೇ ಇರುವ ಅಭ್ಯರ್ಥಿಗಳಿಗೆ ಆಯ್ಕೆ ಸಮಿತಿಯು ಆಯ್ಕೆ ಸಮಯದಲ್ಲಿ ಸಂದರ್ಶನ ಏರ್ಪಡಿಸಿ ಹಾಗೂ ಅವಶ್ಯವಿದ್ದಲ್ಲಿ ಕನ್ನಡ ಭಾಷೆಯ ಜ್ಞಾನದ ಕುರಿತಂತೆ ಓದಿಸಿ, ಬರೆಸಿ ಅವರ ಕನ್ನಡ ಭಾಷಾ ಜ್ಞಾನವನ್ನು ಪರೀಕ್ಷಿಸಿ ಅವರನ್ನು ಆಯ್ಕೆಯನ್ನು ಮಾಡುವ ಬಗ್ಗೆ ಸಮಿತಿಯವರು ನಿರ್ಧರಿಸುವುದು.

ii) **ಅಂಗನವಾಡಿ ಸಹಾಯಕಿ:**

ಅ) ಕನಿಷ್ಠ 4ನೇ ತರಗತಿ ತೇರ್ಗಡೆ, ಗರಿಷ್ಠ 9ನೇ ತರಗತಿ ತೇರ್ಗಡೆ. ಇದರಲ್ಲಿ ಹೆಚ್ಚಿನ ವಿದ್ಯಾರ್ಹತೆಯುಳ್ಳವರನ್ನು ಆಯ್ಕೆ ಮಾಡಬೇಕು. 9ನೇ ತರಗತಿಗಿಂತ ಹೆಚ್ಚಿನ ವಿದ್ಯಾರ್ಹತೆಯನ್ನು ಆಯ್ಕೆಗೆ ಪರಿಗಣಿಸುವಂತಿಲ್ಲ.

ಆ) ಒಂದೇ ವಿದ್ಯಾರ್ಹತೆಯುಳ್ಳ ಒಂದಕ್ಕಿಂತ ಹೆಚ್ಚು ಅರ್ಜಿ ಬಂದಿದ್ದಲ್ಲಿ ಹೆಚ್ಚು ಅಂಕಗಳಿಸಿದವರನ್ನು ಆಯ್ಕೆ ಮಾಡಬೇಕು.

## II ಅಂಗನವಾಡಿ ಕೇಂದ್ರಗಳ ವ್ಯಾಪ್ತಿ ಗುರ್ತಿಸುವ ಬಗ್ಗೆ:-

1) ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರು ಗೌರವಸೇವೆಗೆ ಸೇರಿದೆ. ಅಂಗನವಾಡಿ ಕೇಂದ್ರ ಪ್ರಾರಂಭಿಸುವ ಗ್ರಾಮಾಂತರ ಪ್ರದೇಶದ ಕಂದಾಯ ಗ್ರಾಮ / ನಗರ ಪ್ರದೇಶದ ಕಂದಾಯ ವಾರ್ಡ್‌ನ ಒಟ್ಟು ಜನಸಂಖ್ಯೆಯು ಶೇಕಡ 40ಕ್ಕಿಂತ ಹೆಚ್ಚು ಪರಿಶಿಷ್ಟ ಜಾತಿ ಹಾಗೂ ಶೇಕಡ 40ಕ್ಕಿಂತ ಹೆಚ್ಚು ಪರಿಶಿಷ್ಟ ವರ್ಗದವರನ್ನು ಒಳಗೊಂಡಿದ್ದ ಸಂದರ್ಭದಲ್ಲಿ ಈ ವರ್ಗಗಳ ಪೈಕಿ ಅತೀ ಹೆಚ್ಚು ಜನಸಂಖ್ಯೆಯಿರುವ ವರ್ಗದವರಿಗೆ ಕಾರ್ಯಕರ್ತೆ / ಸಹಾಯಕಿಯ ಹುದ್ದೆಯನ್ನು ನಿಗದಿಪಡಿಸಿ ಪ್ರಕಟಣೆ ಹೊರಡಿಸಬೇಕು. ಪ್ರಕಟಣೆಯಲ್ಲಿ ಸ್ಪಷ್ಟವಾಗಿ ಯಾವ ವರ್ಗದವರಿಗೆ ಹುದ್ದೆಯನ್ನು ನಿಗದಿಪಡಿಸಲಾಗಿದೆಯೆಂದು ಸೂಚಿಸಬೇಕು. ನಿಗದಿಪಡಿಸಿದ ವರ್ಗದವರನ್ನೆ ಆಯ್ಕೆ ಮಾಡುವುದು.

2) ಒಂದು ಗ್ರಾಮದಲ್ಲಿ ಈಗಾಗಲೇ ಅಂಗನವಾಡಿ ಕೇಂದ್ರವಿದ್ದು ಪುನ: ಬೇಡಿಕೆಗ ಅನುಸಾರವಾಗಿ ಹೊಸ ಕೇಂದ್ರವನ್ನು ಪ್ರಾರಂಭಿಸುತ್ತಿದ್ದಲ್ಲಿ, ಹೊಸ ಕೇಂದ್ರ ಪ್ರಾರಂಭಿಸುವ ಪ್ರದೇಶದ (ವ್ಯಾಪ್ತಿಯ) ಜನಸಂಖ್ಯೆಯಲ್ಲಿ ಶೇಕಡ 40ಕ್ಕಿಂತ ಹೆಚ್ಚು ಜನಸಂಖ್ಯೆ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗದವರಿದ್ದಲ್ಲಿ ಆ ಅಂಗನವಾಡಿ ಕೇಂದ್ರಕ್ಕೆ ಸದರಿ ವರ್ಗದವರಿಗೆ ಕಾರ್ಯಕರ್ತೆ / ಸಹಾಯಕಿ ಹುದ್ದೆಯನ್ನು ನಿಗದಿಪಡಿಸಿ ಪ್ರಕಟಣೆ ಹೊರಡಿಸಿ ಅರ್ಜಿಗಳನ್ನು ಆಹ್ವಾನಿಸಿ ಆ ವರ್ಗದವರನ್ನೇ ಆಯ್ಕೆ ಮಾಡುವುದು.

3) ಶೇಕಡ 25ಕ್ಕಿಂತ ಹೆಚ್ಚು ಅಲ್ಪಸಂಖ್ಯಾತ (ಮುಸ್ಲಿಮರು, ಕ್ರಿಶ್ಚಿಯನರು, ಜೈನರು, ಬೌದ್ಧರು, ಪಾರ್ಸಿಗಳು ಮತ್ತು ಸಿಕ್ಕರು) ಜನಸಂಖ್ಯೆಯಿರುವ ಪ್ರದೇಶದ ಅಂಗನವಾಡಿ ಕೇಂದ್ರಗಳಲ್ಲಿ ಕನ್ನಡ ಭಾಷೆಯೊಂದಿಗೆ ಆಯಾ ಅಲ್ಪ ಸಂಖ್ಯಾತ ಸಮುದಾಯದ ಭಾಷೆ ಬಲ್ಲವರನ್ನು ಕಾರ್ಯಕರ್ತೆ / ಸಹಾಯಕಿಯ ಹುದ್ದೆಗೆ ಆಯ್ಕೆ ಮಾಡುವುದು.

4) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರಿಗೆ ಕಾರ್ಯಕರ್ತೆ / ಸಹಾಯಕಿ ಹುದ್ದೆ ನಿಗದಿಪಡಿಸಿದ ಅಂಗನವಾಡಿ ಕೇಂದ್ರಗಳಲ್ಲಿ ನಿಗದಿತ ವರ್ಗದವರಿಂದ ಅರ್ಜಿಗಳು ಬಾರದಿದ್ದಲ್ಲಿ ಮರುಪ್ರಕಟಣೆಯನ್ನು 7 ದಿವಸಗಳೊಳಗೆ ಹೊರಡಿಸಿ ಪುನ:ಅರ್ಜಿಗಳನ್ನು ಆಹ್ವಾನಿಸಬೇಕು.ಆಗಲೂ ನಿಗದಿತ ವರ್ಗದವರಿಂದ ಅರ್ಜಿಗಳು ಬಾರದೇ ಹೋದಲ್ಲಿ ಪುನ: 10 ದಿನಗಳೊಳಗೆ ಪ್ರಕಟಣೆ ಹೊರಡಿಸಿ ಸಾಮಾನ್ಯ ವರ್ಗದವರಿಂದ ಅರ್ಜಿ ಆಹ್ವಾನಿಸಿ ಆಯ್ಕೆ ಮಾಡುವುದು.

5) ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಆಯ್ಕೆಗೆ ಸಂಬಂಧಿಸಿದ ಅಂಗನವಾಡಿ ಕೇಂದ್ರದ ಗ್ರಾಮಾಂತರ ಪ್ರದೇಶದ ಕಂದಾಯ ಗ್ರಾಮ ಹಾಗೂ ನಗರ ಪ್ರದೇಶದ ಕಂದಾಯ ವಾರ್ಡ್‌ಗಳನ್ನು ಪರಿಗಣಿಸಬೇಕು, ಚುನಾವಣಾ ವಾರ್ಡ್‌ಗಳನ್ನು ಪರಿಗಣಿಸುವಂತಿಲ್ಲ.

6) ಒಂದು ಗ್ರಾಮದಲ್ಲಿ ಒಂದಕ್ಕಿಂತ ಹೆಚ್ಚು ಅಂಗನವಾಡಿ ಕೇಂದ್ರಗಳಿದ್ದಾಗ, ಆ ಕೇಂದ್ರ ವ್ಯಾಪ್ತಿಗೆ ಸಂಬಂಧಪಟ್ಟ ಗ್ರಾಮ / ವಾರ್ಡ್‌ರವರಿಂದ ಮಾತ್ರ ಅರ್ಜಿಗಳನ್ನು ಆಹ್ವಾನಿಸಬೇಕು. ಒಂದು ಪಕ್ಷ ಆ ಗ್ರಾಮ / ವಾರ್ಡ್‌ರವರಿಂದ ಅರ್ಜಿಗಳು ಸ್ವೀಕೃತವಾಗದೇ ಹೋದಲ್ಲಿ 7 ದಿವಸಗಳೊಳಗೆ ಮರು ಪ್ರಕಟಣೆ ಹೊರಡಿಸಬೇಕು. ಎರಡನೆಯ ಬಾರಿಯೂ ಸ್ಥಳೀಯರಿಂದ ಅರ್ಜಿ ಸ್ವೀಕೃತವಾಗದಿದ್ದಲ್ಲಿ ಪುನ: 10 ದಿವಸಗಳೊಳಗೆ ಪ್ರಕಟಣೆ ಹೊರಡಿಸಿ ಅತ್ಯಂತ ಸಮೀಪದ ಗ್ರಾಮ / ವಾರ್ಡ್‌ಗಳಿಂದ ಅರ್ಹ ಅಭ್ಯರ್ಥಿಗಳನ್ನು ಆಯ್ಕೆಗೆ ಪರಿಗಣಿಸುವುದು.

7) ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರ ಆಯ್ಕೆಗಾಗಿ ಎರಡನೇ ಬಾರಿಗೆ ಯಾವುದೇ ಮರು ಪ್ರಕಟಣೆ ಹೊರಡಿಸುವ ಮುನ್ನ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಸ್ವತ: ಗ್ರಾಮ / ವಾರ್ಡ್‌ಗೆ ಭೇಟಿ ನೀಡಿ ಆ ವರ್ಗದ / ಗ್ರಾಮದ / ವಾರ್ಡ್‌ನ ಅರ್ಹ ಅಭ್ಯರ್ಥಿಗಳು ಲಭ್ಯವಿಲ್ಲವೆಂಬ ಬಗ್ಗೆ ಸ್ಥಳ ಪರಿಶೀಲನಾವರದಿ ಪಡೆದುಕೊಂಡಿರಬೇಕು.

8) ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಆಯ್ಕೆಗಾಗಿ ಪ್ರಕಟಣೆಯನ್ನು ಸ್ಪಷ್ಟ / ನಿಖರವಾಗಿ ಹೊರಡಿಸತಕ್ಕದ್ದು. ಹುದ್ದೆ ಖಾಲಿಯಿರುವ ಸ್ಥಳ, ಆ ಹುದ್ದೆ ಜನಸಂಖ್ಯೆ ಆಧಾರದಲ್ಲಿ ಯಾವ ವರ್ಗಕ್ಕೆ ನಿಗದಿಪಡಿಸಲಾಗಿದೆ ಎಂಬ ಬಗ್ಗೆ ತಿಳಿಸಿ ಸ್ಥಳೀಯ ದಿನಪತ್ರಿಕೆಗಳಲ್ಲಿ ಪ್ರಕಟಣೆ ಹೊರಡಿಸತಕ್ಕದ್ದು. ಪ್ರಕಟಣೆಯನ್ನು ಗ್ರಾಮದ ಕೃಷಿ ಸಂಪರ್ಕ ಕೇಂದ್ರ, ಪ್ರಾಥಮಿಕ ಆರೋಗ್ಯ ಕೇಂದ್ರ, ಶಾಲೆ, ಗ್ರಾಮ ಲೆಕ್ಕಿಗರ

ಕಛೇರಿ, ಅಂಗನವಾಡಿ ಕಟ್ಟಡ, ಗಾಮ ಪಂಚಾಯತ್ ಕಛೇರಿ ಕಟ್ಟಡ ಹಾಗೂ ಇನ್ನಿತರ ಸಾರ್ವಜನಿಕ ಸ್ಥಳಗಳಲ್ಲಿ ಸೂಚನಾ ಫಲಕದ ಮೇಲೆ ಪ್ರದರ್ಶಿಸತಕ್ಕದ್ದು. ಪ್ರಕಟಣೆ ಹೊರಡಿಸಿದ ದಿನಾಂಕದಿಂದ 25 ದಿನಗಳೊಳಗೆ ಅರ್ಜಿ ಸಲ್ಲಿಸುವ ಕಾಲಾವಧಿಯನ್ನು ನಿಗದಿಪಡಿಸಿರತಕ್ಕದ್ದು ಹಾಗೂ ಪ್ರಕಟಣೆಯ ಪ್ರತಿಯನ್ನು ಆಯ್ಕೆ ಸಮಿತಿಯ ಎಲ್ಲಾ ಸದಸ್ಯರಿಗೂ ಕಳುಹಿಸತಕ್ಕದ್ದು.

9) ಅಂಗನವಾಡಿ ಕಾರ್ಯಕರ್ತೆ / ಸಹಾಯಕಿ ಹುದ್ದೆಗೆ ಅರ್ಜಿ ಸಲ್ಲಿಸಿದವರಲ್ಲಿ ಒಂದಕ್ಕಿಂತ ಹೆಚ್ಚು ಅಭ್ಯರ್ಥಿಗಳು ಸಮಾನ ಅಂಕ ಗಳಿಸಿದ್ದಲ್ಲಿ ವಯೋಹಿರಿತನವನ್ನು ಪರಿಗಣಿಸಬೇಕು. ವಯಸ್ಸು ಸಮಾನವಾಗಿದ್ದಲ್ಲಿ ವಿವಾಹಿತರನ್ನು ಪರಿಗಣಿಸಬೇಕು.

10) ಅಂಗನವಾಡಿ ಕಾರ್ಯಕರ್ತೆ ಹುದ್ದೆ ಖಾಲಿಯಾದ / ಹೊಸ ಕೇಂದ್ರಕ್ಕೆ ಅರ್ಹ ಸಹಾಯಕಿಯರಿಂದ ಕಾರ್ಯಕರ್ತೆ ಹುದ್ದೆ ಕೋರಿ ಅರ್ಜಿ ಸ್ವೀಕೃತವಾಗಿದ್ದಲ್ಲಿ, ಅವರನ್ನೇ ಆಯ್ಕೆ ಮಾಡತಕ್ಕದ್ದು. ಅಂತಹ ಯಾವುದೇ ಅರ್ಜಿಗಳು ಸ್ವೀಕೃತವಾಗಿಲ್ಲದಿದ್ದಲ್ಲಿ, ಸ್ಥಾನಪಲ್ಲಟ ಕೋರಿ ಬಂದಿರುವ ಅರ್ಜಿಗಳನ್ನು ಪರಿಗಣಿಸುವುದು. ಸ್ಥಾನಪಲ್ಲಟ ಕೋರಿ ಯಾವುದೇ ಅರ್ಜಿಗಳು ಸ್ವೀಕೃತವಾಗಿಲ್ಲದಿದ್ದಲ್ಲಿ ಹೊಸದಾಗಿ ಆಯ್ಕೆ ಮಾಡುವ ಪ್ರಕ್ರಿಯೆಯನ್ನು ಪ್ರಾರಂಭಿಸಿ ಗರಿಷ್ಠ 2 ತಿಂಗಳೊಳಗೆ ಮುಗಿಸತಕ್ಕದು.

11) ಸ್ಥಳೀಯ ಚುನಾಯಿತ ಪ್ರತಿನಿಧಿಗಳು ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಹುದ್ದೆಗೆ ಅರ್ಜಿ ಸಲ್ಲಿಸಿದ್ದು, ಆಯ್ಕೆಯಾಗುವ ಸಂಭವವಿದ್ದಲ್ಲಿ, ಆಯ್ಕೆ ಪಟ್ಟಿ ಪ್ರಕಟಿಸುವ ಮುನ್ನ ಚುನಾಯಿತ ಸದಸ್ಯತ್ವಕ್ಕೆ ರಾಜೀನಾಮೆ ನೀಡಿ ರಾಜೀನಾಮೆ ಅಂಗೀಕೃತ ಪತ್ರ ನೀಡಬೇಕಾಗಿರುವುದು ಕಡ್ಡಾಯ. ಅಂದರೆ ಯಾವುದಾದರೂ ಒಂದು ಸ್ಥಾನದಲ್ಲಿ ಮಾತ್ರ ಕೆಲಸ ನಿರ್ವಹಿಸಲು ಅವಕಾಶವಿದೆ.

## III) ಆಯ್ಕೆ ಆದ್ಯತೆ :

ಈ ಕೆಳಕಂಡಂತೆ ಆದ್ಯತೆ ಪಡೆಯಲು ಇಚ್ಛಿಸುವ ಅರ್ಜಿದಾರರು ನಿಗದಿತ ವಿದ್ಯಾರ್ಹತೆ ಹೊಂದಿದ್ದು, ವಯೋಮಿತಿಯೊಳಗೆ ಮತ್ತು ಸ್ಥಳೀಯರಾಗಿರಬೇಕಾಗಿರುವುದು ಕಡ್ಡಾಯ.

### 1) ಆಸಿಡ್ ದಾಳಿಗೊಳಗಾದವರ ಆಯ್ಕೆ:-

ಆಸಿಡ್ ದಾಳಿಗೆ ತುತ್ತಾದ ಮಹಿಳೆಯರು ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಹುದ್ದೆಗೆ ಅರ್ಜಿ ಸಲ್ಲಿಸಿದ್ದಲ್ಲಿ, ಇತರ ಎಲ್ಲಾ ಸ್ವೀಕೃತ ಅರ್ಜಿಗಳನ್ನು ಪರಿಗಣಿಸದೆ ಮೊದಲ ಆದ್ಯತೆ ಮೇರೆಗೆ ನೇರವಾಗಿ ಅವರನ್ನೆ ಆಯ್ಕೆ ಮಾಡತಕ್ಕದ್ದು

### 2) ಇಲಾಖೆಯ ಸಂಸ್ಥೆಗಳ ನಿವಾಸಿಗಳ ಆಯ್ಕೆ:-

ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಹುದ್ದೆಗಳಿಗೆ ಬಾಲನ್ಯಾಯ ಕಾಯ್ದೆಯಡಿ ಇಲಾಖೆಯ ಸಂಸ್ಥೆಗಳಲ್ಲಿ ಹಾಗೂ ರಾಜ್ಯ ಮಹಿಳಾ ನಿಲಯಗಳಲ್ಲಿ ಆಶ್ರಯ ಪಡೆದ ಹಾಲಿ / ಮಾಜಿ ನಿವಾಸಿಗಳು ಅರ್ಜಿ ಸಲ್ಲಿಸಿದಾಗ ಮಾರ್ಗಸೂಚಿಯ ಕ್ರಮ ಸಂಖ್ಯೆ **III (1)** ನೆಯವರನ್ನು ಹೊರತು ಪಡಿಸಿ ಇತರ ಎಲ್ಲಾ ಸ್ವೀಕೃತ ಅರ್ಜಿಗಳನ್ನು ಪರಿಗಣಿಸಿದೆ ಎರಡನೆ ಆದ್ಯತೆ ಮೇರೆಗೆ ನೇರವಾಗಿ ಅವರನ್ನೆ ಆಯ್ಕೆ ಮಾಡತಕ್ಕದ್ದು

### 3) ವಿಧವೆಯರ ಆಯ್ಕೆ:-

ಅ) ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಹುದ್ದೆಗಳಿಗೆ ವಿಧವೆಯರು ಅರ್ಜಿ ಸಲ್ಲಿಸಿದಾಗ ಮಾರ್ಗಸೂಚಿಯ **III (1)** ಮತ್ತು **(2)** ನೆಯವರನ್ನು ಹೊರತು ಪಡಿಸಿ ಇತರ ಎಲ್ಲಾ ಸ್ವೀಕೃತ ಅರ್ಜಿಗಳನ್ನು ಪರಿಗಣಿಸಿದೆ ಮೂರನೆ ಆದ್ಯತೆ ಮೇರೆಗೆ ನೇರವಾಗಿ ಅವರನ್ನೆ ಆಯ್ಕೆ ಮಾಡತಕ್ಕದ್ದು ಅರ್ಜಿ ಸಲ್ಲಿಸಿದ ನಂತರ ವಿಧವೆಯಾದಲ್ಲಿ ಪರಿಗಣಿಸುವಂತಿಲ್ಲ.

ಆ) ವಿಧವೆಯರಲ್ಲಿ, ಆತ್ಮಹತ್ಯೆ ಮಾಡಿಕೊಂಡ ರೈತರ ಪತ್ನಿಗೆ (ವಿಧವೆಗೆ) ಪ್ರಥಮ ಆದ್ಯತೆ ನೀಡತಕ್ಕದ್ದು

ಇ) ವಿಧವೆಯರು ತಾವು ಪ್ರಸ್ತುತ ಎಲ್ಲಿ ವಾಸವಿರುವುದಾಗಿ, ವಾಸಸ್ಥಳ ದೃಢೀಕರಣವನ್ನು ಸಲ್ಲಿಸಿರುತ್ತಾರೆ, ಆ ಸ್ಥಳವನ್ನೇ ಅವರ ವಾಸಸ್ಥಳವೆಂದು ಪರಿಗಣಿಸತಕ್ಕದ್ದು.

ಈ) ಒಂದೇ ಹುದ್ದೆಗೆ ಇಬ್ಬರು ವಿಧವೆಯರು ಅರ್ಜಿ ಸಲ್ಲಿಸಿದ್ದಲ್ಲಿ ಗರಿಷ್ಠ ಅಂಕ ಪಡೆದವರನ್ನು ಆಯ್ಕೆ ಮಾಡಬಹುದಾಗಿದೆ.

4) ಅಂಗವಿಕಲರ ಆಯ್ಕೆ:-

ಇ) ಅಂಗನವಾಡಿ ಕಾರ್ಯಕರ್ತೆಯರ ಹುದ್ದೆಗಳಿಗೆ ಅಂಗವಿಕಲರು ಅರ್ಜಿ ಸಲ್ಲಿಸಿದಾಗ, ಮಾರ್ಗಸೂಚಿಯ III (1) (2) ಮತ್ತು (3) ನೆಯವರನ್ನು ಹೊರತು ಪಡಿಸಿ ಇತರ ಎಲ್ಲಾ ಸ್ವೀಕೃತ ಅರ್ಜಿಗಳನ್ನು ಪರಿಗಣಿಸಿದೆ ನಾಲ್ಕನೆ ಆದ್ಯತೆ ಮೇರೆಗೆ ನೇರವಾಗಿ ಅವರನ್ನೆ ಆಯ್ಕೆ ಮಾಡತಕ್ಕದ್ದು.

ಈ) ಅಂಗವಿಕಲರು ಪ್ರಸ್ತುತ ತಾವು ಎಲ್ಲಿ ವಾಸವಾಗಿರುವುದಾಗಿ ವಾಸಸ್ಥಳ ಪ್ರಮಾಣ ಪತ್ರವನ್ನು ಸಲ್ಲಿಸಿರುತ್ತಾರೋ ಆ ಸ್ಥಳವನ್ನೆ ಅವರ ವಾಸಸ್ಥಳವೆಂದು ಪರಿಗಣಿಸತಕ್ಕದ್ದು.

ಉ) ಅಂಗನವಾಡಿ ಕಾರ್ಯಕರ್ತೆ ಹುದ್ದೆಯಲ್ಲಿ 3-6 ವರ್ಷ ಮಕ್ಕಳಿಗೆ ಆಟ ಮತ್ತು ಅಭಿನಯ ಗೀತೆಗಳ ಮೂಲಕ ಶಾಲಾ ಪೂರ್ವ ಶಿಕ್ಷಣವನ್ನು ನೀಡಲಾಗುತ್ತಿದ್ದು ಚಟುವಟಿಕೆ ವೇಳೆಯಲ್ಲಿ ಮಕ್ಕಳನ್ನು ಹಿಡಿದೆತ್ತಿ ನಿಲ್ಲಿಸಲು ಹಾಗೂ ಅಭಿನಯ ಮಾಡಿ ತೋರಿಸಬೇಕಾಗಿರುತ್ತದೆ. ವೃತ್ತಸಭೆ, ತಾಯಂದಿರ ಸಭೆ ಮತ್ತು ಮನೆ ಭೇಟಿ ನಿರ್ವಹಿಸಬೇಕಾಗಿರುತ್ತದೆ. ಆದ ಕಾರಣ ಕಿವುಡರು ಮತ್ತು ಮೂಕರು, ಕುರುಡರು, ಬುದ್ಧಿ ಮಾಂದ್ಯರು, ಮಾನಸಿಕ ಅಸ್ವಸ್ಥರು ಕಾರ್ಯಕರ್ತೆ ಹುದ್ದೆಗೆ ಅರ್ಹರಲ್ಲ.

ಊ) ಅಂಗನವಾಡಿ ಸಹಾಯಕಿಯ ಹುದ್ದೆಯಲ್ಲಿ ಅಂಗನವಾಡಿ ಫಲಾನುಭವಿಗಳಿಗೆ ಪೂರಕ ಪೌಷ್ಠಿಕ ಆಹಾರವನ್ನು ಬೇಯಿಸಿ / ಸಿದ್ಧಪಡಿಸಿ ಉಣಬಡಿಸುವುದು, ಕೇಂದ್ರವನ್ನು ಸ್ವಚ್ಛಗೊಳಿಸುವುದು, ಮಕ್ಕಳನ್ನು ಅವರ ಮನೆಗಳಿಂದ ಕೇಂದ್ರಕ್ಕೆ ಕರೆತರುವುದು ಹಾಗೂ ಕಾರ್ಯಕರ್ತೆಯು ವೃತ್ತಸಭೆ, ತಾಯಂದಿರ ಸಭೆ ಮತ್ತು ಮನೆ ಭೇಟಿಗೆ ಹೋದಾಗ ಅಂಗನವಾಡಿ ಕೇಂದ್ರದ ಜವಾಬ್ದಾರಿಯನ್ನು ನಿರ್ವಹಿಸಬೇಕು. ಆದ್ದರಿಂದ ಸಹಾಯಕಿ ಹುದ್ದೆಗೆ ಅಂಗವಿಕಲ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಅವಕಾಶವಿರುವುದಿಲ್ಲ.

ಋ) ಇತರೆ ದೈಹಿಕ ಅಂಗವೈಕಲ್ಯತೆ ಶೇ.60 ಮೀರದಂತೆ ಇರುವವರು ಅರ್ಜಿ ಸಲ್ಲಿಸಬಹುದಾಗಿದೆ. ಅಂಗೀಕೃತ ಪ್ರಾಧಿಕಾರ(ಜಿಲ್ಲಾ ವೈದ್ಯಕೀಯ ಮಂಡಳಿ)ದಿಂದ ಪಡೆದ ಪ್ರಮಾಣ ಪತ್ರವನ್ನು ಅರ್ಜಿಯೊಂದಿಗೆ ಹಾಜರುಪಡಿಸಬೇಕು.

ಎ) ಅಂಗವಿಕಲ ಅಭ್ಯರ್ಥಿಗಳನ್ನು ಆಯ್ಕೆಮಾಡುವ ಸಂದರ್ಭದಲ್ಲಿ ಅಂಗವಿಕಲತೆಯ ಪ್ರಮಾಣದ ಬಗ್ಗೆ ಸಂಶಯ ಉಂಟಾದಲ್ಲಿ ಆ ಅಭ್ಯರ್ಥಿಯನ್ನು ಆಯ್ಕೆ ಸಮಿತಿಯ ಮುಂದೆ ಖುದ್ದು ಹಾಜರಾಗಲು ಸೂಚಿಸಿ ಸದರಿ ಹುದ್ದೆ ನಿರ್ವಹಿಸಲು ಸಮರ್ಥರಿರುವ ಬಗ್ಗೆ ಸಮಿತಿಯೇ ಪರಿಶೀಲಿಸಿ ನಿರ್ಧರಿಸತಕ್ಕದ್ದು.

ಋ) ಒಂದೇ ಹುದ್ದೆಗೆ ಇಬ್ಬರು ಅಂಗವಿಕಲರು ಅರ್ಜಿ ಸಲ್ಲಿಸಿದ್ದಲ್ಲಿ ಗರಿಷ್ಠ ಅಂಕ ಪಡೆದವರನ್ನು ಆಯ್ಕೆ ಮಾಡಬಹುದಾಗಿದೆ.

IV) ಬೋನಸ್ ಅಂಕಗಳು:- (ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರಿಗೆ)

1) ಮಾಜಿ ದೇವದಾಸಿಯ ಮಗಳು.

2) ಯೋಜನಾ ನಿರಾಶ್ರಿತರು

3) ವಿಚ್ಛೇದಿತ ಮಹಿಳೆಯರು.

4) ಪರಿತ್ಯಕ್ತೆಯರು

ಹೆಚ್ಚಿನ 5 ಬೋನಸ್ ಅಂಕಗಳಿಗೆ ಅರ್ಹರಾಗಿರುತ್ತಾರೆ. ಪ್ರತಿ ವಿನಾಯಿತಿಗೂ 5 ಬೋನಸ್ ಅಂಕ ನೀಡುವುದು, ಆದರೆ ಯಾವುದೇ ಕಾರಣಕ್ಕೂ ಅವರು ವಿದ್ಯಾರ್ಹತೆಯಲ್ಲಿ ಗಳಿಸಿದ ಅಂಕಕ್ಕೆ ಶೇಕಡಾ 5(5%) ಅಂಕ ನೀಡುವಂತಿಲ್ಲ. ಉದಾ: ಒಬ್ಬ ಅಭ್ಯರ್ಥಿಯು ನಿರಾಶ್ರಿತರು, ಪರಿತ್ಯಕ್ತೆ, ಮಾಜಿ ದೇವದಾಸಿ, ವಿಚ್ಛೇದಿತರು ಆಗಿದ್ದಲ್ಲಿ ಪ್ರತಿ ವಿನಾಯಿತಿಗೂ 5 ಬೋನಸ್ ಅಂಕಗಳನ್ನು ನೀಡುವುದು. ಅಂದರೆ ಸದರಿಯವರು ನಿಗದಿತ ವಿದ್ಯಾರ್ಹತೆಯಲ್ಲಿ ಗಳಿಸಿದ ಅಂಕಗಳಿಗೆ ಮಾಜಿ ದೇವದಾಸಿಯರ ಅವಿವಾಹಿತ ಹೆಣ್ಣು ಮಕ್ಕಳು +5, ಯೋಜನಾ ನಿರಾಶ್ರಿತರು +5, ವಿಚ್ಛೇದಿತ ಮಹಿಳೆಯರು +5, ಪರಿತ್ಯಕ್ತೆಯರು +5, ಒಟ್ಟು 20 ಬೋನಸ್ ಅಂಕಗಳನ್ನು ನೀಡುವುದು. ಬೋನಸ್ ಅಂಕ ಪಡೆಯಲು ಸಂಬಂಧಿತ ದಾಖಲೆಗಳನ್ನು ಅರ್ಜಿಯೊಂದಿಗೆ ಲಗತ್ತಿಸಬೇಕಾಗಿರುವುದು ಕಡ್ಡಾಯ.

## V) ಆನ್-ಲೈನ್ ಅರ್ಜಿಯೊಂದಿಗೆ ಲಗತ್ತಿಸಬೇಕಾದ ದಾಖಲೆಗಳು:-

1) ಅರ್ಜಿ ನಿಗದಿತ ನಮೂನೆಯಲ್ಲಿ. (ಆನ್-ಲೈನ್)
2) ಜನನ ಪ್ರಮಾಣ ಪತ್ರ / ಜನ್ಮ ದಿನಾಂಕ ಇರುವ ಎಸ್.ಎಸ್.ಎಲ್.ಸಿ ಅಂಕ ಪಟ್ಟಿ.
3) ನಿಗದಿತ ವಿದ್ಯಾರ್ಹತೆಯ ಅಂಕಪಟ್ಟಿ.
4) ತಹಶೀಲ್ದಾರರು/ ಉಪತಹಶೀಲ್ದಾರರಿಂದ ಪಡೆದ ಒಂದು(1)ವರ್ಷದೊಳಗಿನ ವಾಸಸ್ಥಳ ದೃಢೀಕರಣ ಪತ್ರ.
5) ಅಭ್ಯರ್ಥಿಗಳ ಜಾತಿ ಪ್ರಮಾಣ ಪತ್ರ.
6) ಪತಿಯ ಮರಣ ಪ್ರಮಾಣ ಪತ್ರ (ವಿಧವಾ ವೇತನದ ಧೃಢೀಕರಣವನ್ನು ಪರಿಗಣಿಸುವಂತಿಲ್ಲ).
7) ಆತ್ಮಹತ್ಯೆ ಮಾಡಿಕೊಂಡ ರೈತರ ಪತ್ನಿ ಎಂದು ಉಪ ವಿಭಾಗಾಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರ
8) ಅಂಗವಿಕಲತೆ ಪ್ರಮಾಣ ಪತ್ರ (ಅಂಗವಿಕಲ ವೇತನದ ಧೃಢೀಕರಣವನ್ನು ಪರಿಗಣಿಸುವಂತಿಲ್ಲ).
9) ವಿಚ್ಛೇಧನ ಪ್ರಮಾಣ ಪತ್ರ ( ನ್ಯಾಯಾಲಯದಿಂದ ಪಡೆದಿರಬೇಕು)
10) ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ವತಿಯಿಂದ ನಡೆಸಲ್ಪಟ್ಟ ಮಾಜಿ ದೇವದಾಸಿಯರ ಸಮೀಕ್ಷೆಯ ಪಟ್ಟಿಯಲ್ಲಿರುವ ಮಾಜಿ ದೇವದಾಸಿಯರ ಮಕ್ಕಳು ಎಂಬುದರ ಬಗ್ಗೆ ಮಹಿಳಾ ಅಭಿವೃದ್ಧಿ ನಿಗಮದ ಅಧಿಕಾರಿಗಳಿಂದ ಪ್ರಮಾಣ ಪತ್ರ.
11) ಪರಿತ್ಯಕ್ತೆ ಬಗ್ಗೆ ಗ್ರಾಮಪಂಚಾಯ್ತಿಯಿಂದ ಪಡೆದ ಪ್ರಮಾಣ ಪತ್ರ.
12) ಇಲಾಖೆಯ ಸುಧಾರಣಾ ಸಂಸ್ಥೆ / ರಾಜ್ಯ ಮಹಿಳಾ ನಿಲಯಗಳ ನಿವಾಸಿ ಬಗ್ಗೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಅಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರ.
13) ಯೋಜನಾ ನಿರಾಶ್ರಿತರ ಬಗ್ಗೆ ತಹಶೀಲ್ದಾರರಿಂದ ಪಡೆದ ಪ್ರಮಾಣ ಪತ್ರ.

## VI) ಆಯ್ಕೆ ವಿಧಾನ:-

1) ಅರ್ಜಿ ಸಲ್ಲಿಸಲು ನಿಗಧಿ ಪಡಿಸಿರುವ ಕೊನೆಯ ದಿನಾಂಕದ ನಂತರ ಮುಂದಿನ 7 ಕೆಲಸದ ದಿನಗಳೊಳಗೆ ಸಮಿತಿ ಸಭೆ ಸೇರಬೇಕು.
2) ಆಯ್ಕೆ ಸಮಿತಿಯ ಎಲ್ಲಾ ಸದಸ್ಯರು ಹಾಜರಾಗಲು ಸಾಧ್ಯವಾಗದಂತಹ ಅನಿವಾರ್ಯ ಕಾರಣಗಳಿದ್ದಲ್ಲಿ ಕನಿಷ್ಠ 2/3 ರಷ್ಟು ಸದಸ್ಯರು ಕಡ್ಡಾಯವಾಗಿ ಹಾಜರಿರಬೇಕು.
3) ಆನ್-ಲೈನ್ ನಲ್ಲಿ ಹಾಕಿದ್ದ ಎಲ್ಲಾ ಅರ್ಜಿಗಳನ್ನು ಅಂದೇ ಪರಿಶೀಲಿಸುವುದು.

4) ಆನ್-ಲೈನ್ ಅರ್ಜಿಯೊಂದಿಗೆ ಯಾವುದೇ ಅಗತ್ಯ ದಾಖಲೆಯನ್ನು ಸಲ್ಲಿಸದೇ ಇದ್ದಲ್ಲಿ ಅಂತಹ ಅರ್ಜಿಗಳನ್ನು ತಿರಸ್ಕರಿಸುವುದು.

5) ಸ್ವೀಕೃತವಾದ ಅರ್ಜಿಗಳನ್ನು ವಿದ್ಯಾರ್ಹತೆಯಲ್ಲಿ ಪಡೆದ ಅಂಕ ಮತ್ತು ಬೋನಸ್ ಅಂಕಗಳನ್ನು ಒಳಗೊಂಡಂತೆ ಪಡೆದ ಒಟ್ಟು ಅಂಕಗಳಿಗನುಸಾರವಾಗಿ ಕ್ರೋಢೀಕೃತ ಪಟ್ಟಿಯನ್ನು ಆನ್-ಲೈನ್‌ನಲ್ಲಿ ಸಿದ್ದಪಡಿಸಿ, ಅರ್ಹತೆ ಮತ್ತು ಮೆರಿಟ್‌ಗನುಸಾರವಾಗಿ ಪರಿಶೀಲಿಸಿ ಹೆಚ್ಚು ಅಂಕ ಪಡೆದ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಅಂದೇ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಸೂಚನಾ ಫಲಕದಲ್ಲಿ ಪ್ರಕಟಿಸುವುದು.

6) ಆಕ್ಷೇಪಣೆಗಳಿದ್ದಲ್ಲಿ ಸಲ್ಲಿಸಲು ಒಂದು ವಾರ(7 ದಿನಗಳು) ಕಾಲಾವಕಾಶ ನೀಡುವುದು ಹಾಗೂ ಕಾಲಾವಕಾಶ ಮುಗಿದ ಮುಂದಿನ ಕೆಲಸದ ದಿನವೇ ಸಮಿತಿಯ ಸಭೆ ಕರೆದು ಆಕ್ಷೇಪಣೆಗಳು ಸ್ವೀಕೃತವಾದಲ್ಲಿ ಅವುಗಳನ್ನು ಕ್ರೋಢೀಕರಿಸಿ ಚರ್ಚಿಸಿ ಕಾರ್ಯಕರ್ತೆ / ಸಹಾಯಕಿಯರ ಅಂತಿಮ ಆಯ್ಕೆಪಟ್ಟಿಯನ್ನು ಅಂದೇ ಸೂಚನಾ ಫಲಕದಲ್ಲಿ ಪ್ರಕಟಿಸುವುದು.

7) ಆಯ್ಕೆ ಪ್ರಕ್ರಿಯೆಯಲ್ಲಿ ಯಾವುದೇ ಸಮಸ್ಯೆ ಕಂಡು ಬಂದಲ್ಲಿ ನೇಮಕಾತಿ ಪ್ರಾಧಿಕಾರವೇ ಚರ್ಚಿಸಿ ನಿಯಮಾನುಸಾರ ಕ್ರಮವಹಿಸುವುದು. ಆಯ್ಕೆ ಸಮಿತಿಯ ನಿರ್ಧಾರವೇ ಅಂತಿಮವಾಗಿರುತ್ತದೆ.

8) ಆಯ್ಕೆ ನಡವಳಿ ಪುಸ್ತಕದಲ್ಲಿ ಆಯ್ಕೆ ಸಮಿತಿಗೆ ಹಾಜರಾದ ಎಲ್ಲಾ ಸದಸ್ಯರ ಹಾಜರಾತಿ ಪಡೆಯುವುದು. ಆಯ್ಕೆ ಪ್ರಕ್ರಿಯೆ ಮುಗಿದ ನಂತರ ನಡವಳಿಗಳನ್ನು ಸವಿವರ(speaking order)ವಾಗಿ, ಕೇಂದ್ರವಾರು ಆಯ್ಕೆಯಾದ ಅಭ್ಯರ್ಥಿಗಳ ಹೆಸರುಗಳನ್ನು ಯಾವ ಮಾನದಂಡಗಳನ್ವಯ ಆಯ್ಕೆ ಮಾಡಲಾಗಿದೆ ಎಂಬ ಷರಾದೊಂದಿಗೆ ನಡವಳಿಯಲ್ಲಿ ದಾಖಲಿಸಿ ಯಾವುದೇ ತಿದ್ದುಪಡಿಗಳಿದ್ದಲ್ಲಿ ಸಕಾರಣದೊಂದಿಗೆ ದೃಢೀಕರಿಸಿ ಹಾಜರಿರುವ ಆಯ್ಕೆ ಸಮಿತಿಯ ಎಲ್ಲಾ ಸದಸ್ಯರ ಸಹಿಯನ್ನು ಕಡ್ಡಾಯವಾಗಿ ಪಡೆಯತಕ್ಕದ್ದು.

9) ಸಂಬಂಧಪಟ್ಟ ಜಿಲ್ಲೆಯ ಉಪನಿರ್ದೇಶಕರು ಅಂತಿಮ ಆಯ್ಕೆ ಪಟ್ಟಿಯಲ್ಲಿರುವ ಅಭ್ಯರ್ಥಿಗಳು ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರಾಗಿ ಕಾರ್ಯನಿರ್ವಹಿಸಲು ನೇಮಕಾತಿ ಆದೇಶಗಳನ್ನು ಹೊರಡಿಸಬೇಕು.

10) ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯ ಹುದ್ದೆಯು ಸಂಪೂರ್ಣವಾಗಿ ಗೌರವ ಸೇವೆಯಾಗಿದ್ದು, ಖಾಯಂ ಹುದ್ದೆಯಲ್ಲವೆಂದು ನೇಮಕಾತಿ ಆದೇಶದಲ್ಲಿ ತಿಳಿಸಬೇಕು. ಆಯ್ಕೆಯಾದ ಅಭ್ಯರ್ಥಿಗಳು ವರದಿ ಮಾಡಿಕೊಳ್ಳುವ ಸಮಯದಲ್ಲಿ ಮೂಲ ದಾಖಲಾತಿಗಳು, ವೈದ್ಯಕೀಯ ಪ್ರಮಾಣ ಪತ್ರ (ಫಿಟ್‌ನೆಸ್ ಸರ್ಟಿಫಿಕೇಟ್) ಗಳನ್ನು ಹಾಜರು ಪಡಿಸಿ ಸಂಬಂಧಪಟ್ಟ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಪರಿಶೀಲಿಸಿ ವರದಿ ಮಾಡಿಸಿಕೊಳ್ಳತಕ್ಕದ್ದು.

## VII) ಅಂಗನವಾಡಿ ಸಹಾಯಕಿಯರನ್ನು ಕಾರ್ಯಕರ್ತೆಯರನ್ನಾಗಿ ಆಯ್ಕೆ ಮಾಡುವ ಬಗ್ಗೆ:

1) ಅಂಗನವಾಡಿ ಕಾರ್ಯಕರ್ತೆ ಹುದ್ದೆ ಖಾಲಿಯಿರುವ / ಹೊಸಕೇಂದ್ರ ಪ್ರಾರಂಭಿಸುತ್ತಿರುವ ಗ್ರಾಮದಲ್ಲಿ ವಾಸಿಸುತ್ತಿರುವ ಸಹಾಯಕಿಯಿದ್ದು, ಅವರು ಎಸ್.ಎಸ್.ಎಲ್.ಸಿ ಉತ್ತೀರ್ಣರಾಗಿದ್ದು, ಕನಿಷ್ಠ 3 ವರ್ಷ ಸೇವೆ ಸಲ್ಲಿಸಿದ್ದು, 45 ವರ್ಷ ವಯೋಮಿತಿಯೊಳಗಿದ್ದು, ಆ ಅಂಗನವಾಡಿ ಕೇಂದ್ರದಿಂದ 3 ಕಿ.ಮೀ. ವ್ಯಾಪ್ತಿಯೊಳಗೆ ವಾಸಿಸುತ್ತಿದ್ದು, ಕಾರ್ಯಕರ್ತೆ ಹುದ್ದೆಗೆ ಅರ್ಜಿ ಸಲ್ಲಿಸಿದ್ದಲ್ಲಿ ಆ ಅಂಗನವಾಡಿ ಕೇಂದ್ರಕ್ಕೆ ಕಾರ್ಯಕರ್ತೆ ಹುದ್ದೆಗೆ ಬೇರೆ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸುವ ಪ್ರಮೇಯವಿರುವುದಿಲ್ಲ. ಸದರಿ ಸಹಾಯಕಿಯನ್ನೇ ಕಾರ್ಯಕರ್ತೆ ಹುದ್ದೆಗೆ ಆಯ್ಕೆ ಮಾಡತಕ್ಕದ್ದು. ಈ ಬಗ್ಗೆ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಆಯ್ಕೆ ಸಮಿತಿಯ ಅಧ್ಯಕ್ಷರಿಗೆ ಪ್ರಸ್ತಾವನೆಯನ್ನು ಸಲ್ಲಿಸಿ ಅನುಮೋದನೆ ಪಡೆದು ಆದೇಶ ಹೊರಡಿಸತಕ್ಕದ್ದು.

2) ಒಂದೇ ಗ್ರಾಮದಲ್ಲಿ ಇಬ್ಬರು ಎಸ್.ಎಸ್.ಎಲ್.ಸಿ ಪಾಸಾದ ಅರ್ಹ ಸಹಾಯಕಿಯರಿದ್ದು ಅರ್ಜಿ ಸಲ್ಲಿಸಿದಲ್ಲಿ ಅವರ ಸೇವಾಹಿರಿತನವನ್ನು ಪರಿಗಣಿಸುವುದು. ಸೇವಾಹಿರಿತನವೂ ಒಂದೇ ಆಗಿದ್ದಲ್ಲಿ ವಯೋಹಿರಿಯರನ್ನು ಪರಿಗಣಿಸಬೇಕು.

**VIII) ಅನುಕಂಪದ ಆಧಾರದಲ್ಲಿ ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರ ಹುದ್ದೆಗೆ ಗುರುತಿಸುವ ಬಗ್ಗೆ**

1. ಸೇವೆಯಲ್ಲಿರುವಾಗಲೇ ಮರಣಹೊಂದುವ ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರ ಅವಿವಾಹಿತ ಮಗಳನ್ನು ಅವರ ತಾಯಿಯು ನಿರ್ವಹಿಸುತ್ತಿದ್ದ ಹುದ್ದೆಗೆ ಅನುಕಂಪದ ಆಧಾರದಲ್ಲಿ ಇತರೆ ಕುಟುಂಬದ ಸದಸ್ಯರಿಂದ ನಿರಾಪೇಕ್ಷಣಾ ಪತ್ರವನ್ನು ನಿಗಧಿತ ಮೊತ್ತದ ಛಾಪಾಕಾಗದದ ಮೇಲೆ ಪಡೆದು ನೇಮಕ ಮಾಡತಕ್ಕದ್ದು.
2. ಅಭ್ಯರ್ಥಿಯ ನಿಗಧಿತ ವಿದ್ಯಾರ್ಹತೆ, ವಯೋಮಿತಿ ಮತ್ತು ಸ್ಥಳೀಯರಾಗಿಬೇಕಾಗಿರುವುದು ಕಡ್ಡಾಯ.

**IX) <u>ಶಿಸ್ತು ಪ್ರಾಧಿಕಾರ:-</u>**

ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಕಾರ್ಯನಿರ್ವಹಣೆಯಲ್ಲಿ ಯಾವುದೇ ನ್ಯೂನತೆಗಳ ಬಗ್ಗೆ ದೂರುಗಳು ಸ್ವೀಕೃತಗೊಂಡಲ್ಲಿ, ಅವುಗಳನ್ನು ಪರಿಶೀಲಿಸಿ ಇವರನ್ನು ಸೇವೆಯಿಂದ ವಜಾಗೊಳಿಸುವ ಅಧಿಕಾರವು ಜಿಲ್ಲಾಧಿಕಾರಿಗಳು / ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ / ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರಿಗೆ ಇರುತ್ತದೆ.

(ಸಂಧ್ಯಾ ಎಲ್. ನಾಯಕ್)
ಸರ್ಕಾರದ ಅಧೀನ ಕಾರ್ಯದರ್ಶಿ-1,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗು ವಿಕಲಚೇತನರ
ಮತ್ತು ಹಿರಿಯ ನಾಗರೀಕರ ಸಬಲೀಕರಣ ಇಲಾಖೆ

ಕರ್ನಾಟಕ ಸರ್ಕಾರ

ಸಂ.ಮಮಇ 303 ಐಸಿಡಿ 2017

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ:19.01.2019

**ತಿದ್ದುಪಡಿ ಆದೇಶ**

ಸರ್ಕಾರದ ಆದೇಶ ಸಂ.ಮಮಇ:303:ಐಸಿಡಿ:2017, ದಿ:23.9.2018ರ ಅನುಬಂಧದಲ್ಲಿ ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರನ್ನು ಆಯ್ಕೆ ಮಾಡಲು ಪರಿಷ್ಕರಿಸಿದ ಮಾರ್ಗಸೂಚಿಗಳನ್ನು ಮತ್ತು ಅರ್ಹತೆಯ ಮಾನದಂಡಗಳನ್ನು ತಿಳಿಸಿ ಆದೇಶಿಸಿದೆ. ಸದರಿ ಮಾರ್ಗಸೂಚಿಗಳಿಗೆ ಈ ಕೆಳಕಂಡ ಅಂಶಗಳನ್ನು ತಿದ್ದುಪಡಿ ಮಾಡಿ ಆದೇಶಿಸಿದೆ.

| ಕ್ರ. ಸಂ. | ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರ ಆಯ್ಕೆ ಮಾರ್ಗಸೂಚಿಗಳು ಮತ್ತು ಅರ್ಹತೆ ಮಾನದಂಡಗಳು –ದಿ:23.09.2017ರ ಆದೇಶದಲ್ಲಿರುವುದು | ತಿದ್ದುಪಡಿ ಮಾಡಲಾಗಿರುವುದು. |
|---|---|---|
| 1 | **III) ಆಯ್ಕೆ ಆದ್ಯತೆ :**<br>ಈ ಕೆಳಕಂಡಂತೆ ಆದ್ಯತೆ ಪಡೆಯಲು ಇಚ್ಚಿಸುವ ಅರ್ಜಿದಾರರು ನಿಗದಿತ ವಿದ್ಯಾರ್ಹತೆ ಹೊಂದಿದ್ದು, ವಯೋಮಿತಿಯೊಳಗೆ ಮತ್ತು ಸ್ಥಳೀಯರಾಗಿರ ಬೇಕಾಗಿರುವುದು ಕಡ್ಡಾಯ.<br>**2) ಇಲಾಖೆಯ ಸಂಸ್ಥೆಗಳ ನಿವಾಸಿಗಳ ಆಯ್ಕೆ:-**<br>ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಹುದ್ದೆಗಳಿಗೆ ಬಾಲನ್ಯಾಯ ಕಾಯ್ದೆಯಡಿ ಇಲಾಖೆಯ ಸಂಸ್ಥೆಗಳಲ್ಲಿ ಹಾಗೂ ರಾಜ್ಯ ಮಹಿಳಾ ನಿಲಯಗಳಲ್ಲಿ ಆಶ್ರಯ ಪಡೆದ ಹಾಲಿ / ಮಾಜಿ ನಿವಾಸಿಗಳು ಅರ್ಜಿ ಸಲ್ಲಿಸಿದಾಗ ಕ್ರಮ ಸಂಖ್ಯೆ III (1) ನೆಯವರನ್ನು ಹೊರತು ಪಡಿಸಿ ಇತರ ಎಲ್ಲಾ ಸ್ವೀಕೃತ ಅರ್ಜಿಗಳನ್ನು ಪರಿಗಣಿಸಿದೆ ಎರಡನೇ ಆದ್ಯತೆ ಮೇರೆಗೆ ನೇರವಾಗಿ ಅವರನ್ನೆ ಆಯ್ಕೆ ಮಾಡತಕ್ಕದ್ದು | **2) ಇಲಾಖೆಯ ಸಂಸ್ಥೆಗಳ ನಿವಾಸಿಗಳ ಆಯ್ಕೆ:-**<br>ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಹುದ್ದೆಗಳಿಗೆ ಬಾಲನ್ಯಾಯ ಕಾಯ್ದೆಯಡಿ ಇಲಾಖೆಯ ಸಂಸ್ಥೆಗಳಲ್ಲಿ ಹಾಗೂ ರಾಜ್ಯ ಮಹಿಳಾ ನಿಲಯಗಳಲ್ಲಿ ಆಶ್ರಯ ಪಡೆದ ಹಾಲಿ / ಮಾಜಿ ನಿವಾಸಿಗಳು ಅರ್ಜಿ ಸಲ್ಲಿಸಿದಾಗ ಕ್ರಮ ಸಂಖ್ಯೆ III (1) ನೆಯವರನ್ನು ಹೊರತು ಪಡಿಸಿ ಇತರ ಎಲ್ಲಾ ಸ್ವೀಕೃತ ಅರ್ಜಿಗಳನ್ನು ಪರಿಗಣಿಸದೆ ಎರಡನೆ ಆದ್ಯತೆ ಮೇರೆಗೆ ನೇರವಾಗಿ ಅವರನ್ನೇ ಆಯ್ಕೆ ಮಾಡತಕ್ಕದ್ದು. **ಇವರಿಗೆ ವಾಸಸ್ಥಳ ದೃಢೀಕರಣವು ಕಡ್ಡಾಯವಲ್ಲ.**<br> |
| 2 | ಅಂಗನವಾಡಿ ಕಾರ್ಯಕರ್ತೆ ಹುದ್ದೆ ಖಾಲಿಯಿರುವ / ಹೊಸಕೇಂದ್ರ ಪ್ರಾರಂಭಿಸುತ್ತಿರುವ ಗ್ರಾಮದಲ್ಲಿ ವಾಸಿಸುತ್ತಿರುವ ಸಹಾಯಕಿಯರಿದ್ದು, ಅವರು ಎಸ್.ಎಸ್.ಎಲ್.ಸಿ ಉತ್ತೀರ್ಣರಾಗಿದ್ದು, ಕನಿಷ್ಠ 3ವರ್ಷ ಸೇವೆ ಸಲ್ಲಿಸಿದ್ದು, 45ವರ್ಷ ವಯೋ ಮಿತಿಯೊಳಗಿದ್ದು, ಆ ಅಂಗನವಾಡಿ ಕೇಂದ್ರದಿಂದ 3ಕಿ.ಮೀ. ವ್ಯಾಪ್ತಿಯೊಳಗೆ ವಾಸಿಸುತ್ತಿದ್ದು, ಕಾರ್ಯಕರ್ತೆ ಹುದ್ದೆಗೆ ಅರ್ಜಿ ಸಲ್ಲಿಸಿದ್ದಲ್ಲಿ ಆ ಅಂಗನವಾಡಿ ಕೇಂದ್ರಕ್ಕೆ ಕಾರ್ಯಕರ್ತೆ ಹುದ್ದೆಗೆ ಬೇರೆ ಅಭ್ಯರ್ಥಿಗಳಿಂದ | ಅಂಗನವಾಡಿ ಕಾರ್ಯಕರ್ತೆ ಹುದ್ದೆ ಖಾಲಿ ಇರುವ /ಹೊಸ ಕೇಂದ್ರ ಪ್ರಾರಂಭಿಸುತ್ತಿರುವ ಗ್ರಾಮದ ಯೋಜನಾ ವ್ಯಾಪ್ತಿಯಲ್ಲಿ ವಾಸಿಸುತ್ತಿರುವ ಮಿನಿ **ಅಂಗನವಾಡಿ ಕಾರ್ಯಕರ್ತೆಯರಿದ್ದಲ್ಲಿ,** ಅವರು ಆ **ಅಂಗನವಾಡಿ ಕೇಂದ್ರದಿಂದ 3ಕಿ.ಮೀ. ವ್ಯಾಪ್ತಿಯೊಳಗೆ ವಾಸಿಸುತ್ತಿದ್ದು,** ಕಾರ್ಯಕರ್ತೆ ಹುದ್ದೆಗೆ ಅರ್ಜಿ ಸಲ್ಲಿಸಿದ್ದಲ್ಲಿ ಆ ಅಂಗನವಾಡಿ ಕೇಂದ್ರದ ಕಾರ್ಯಕರ್ತೆ ಹುದ್ದೆಗೆ ಬೇರೆ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸದೆ, ಆದ್ಯತೆ ಮೇರೆಗೆ ಸದರಿ ಮಿನಿ ಅಂಗನವಾಡಿ ಕಾರ್ಯ |

| | | |
|---|---|---|
| | ಅರ್ಜಿಗಳನ್ನು ಆಹ್ವಾನಿಸುವ ಪ್ರಮೇಯವಿರುವುದಿಲ್ಲ. ಸದರಿ ಸಹಾಯಕಿಯನ್ನೇ ಕಾರ್ಯಕರ್ತೆ ಹುದ್ದೆಗೆ ಆಯ್ಕೆ ಮಾಡತಕ್ಕದ್ದು. ಈ ಬಗ್ಗೆ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಆಯ್ಕೆ ಸಮಿತಿಯ ಅಧ್ಯಕ್ಷರಿಗೆ ಪ್ರಸ್ತಾವನೆಯನ್ನು ಸಲ್ಲಿಸಿ ಅನುಮೋದನೆ ಪಡೆದು ಆದೇಶ ಹೊರಡಿಸತಕ್ಕದ್ದು. | ಕರ್ತೆಯನ್ನು ಸಾಮಾನ್ಯ ಅಂಗನವಾಡಿ ಕಾರ್ಯಕರ್ತೆ ಹುದ್ದೆಗೆ ಆಯ್ಕೆ ಮಾಡತಕ್ಕದ್ದು ಹಾಗು 3ಕಿ.ಮೀ. ವ್ಯಾಪ್ತಿಯಲ್ಲಿ ವಾಸಿಸುತ್ತಿರುವ ಎಸ್.ಎಸ್.ಎಲ್.ಸಿ ಉತ್ತೀರ್ಣರಾದ, ಅರ್ಹ ಸಹಾಯಕಿಯರಿದ್ದಲ್ಲಿ ಎರಡನೇ ಆದ್ಯತೆ ನೀಡತಕ್ಕದ್ದು. ಈ ಬಗ್ಗೆ ಶಿಶುಅಭಿವೃದ್ಧಿ ಯೋಜನಾಧಿಕಾರಿಗಳು ಆಯ್ಕೆ ಸಮಿತಿಯ ಅಧ್ಯಕ್ಷರಿಗೆ ಪ್ರಸ್ತಾವನೆಯನ್ನು ಸಲ್ಲಿಸಿ ಅನುಮೋದನೆ ಪಡೆದು ಆದೇಶ ಹೊರಡಿಸತಕ್ಕದ್ದು. |

(ಸಂಧ್ಯಾ ಎಲ್. ನಾಯಕ್)
ಸರ್ಕಾರದ ಅಧೀನ ಕಾರ್ಯದರ್ಶಿ-1
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರೀಕರ ಸಬಲೀಕರಣ ಇಲಾಖೆ.

ಇವರಿಗೆ:-

1. ಪ್ರಧಾನ ಮಹಾಲೇಖಪಾಲರು (ಎ & ಇ), ಕರ್ನಾಟಕ, ಪಾರ್ಕ್‌ಹೌಸ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ:5329, ಬೆಂಗಳೂರು-560 001.
2. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು.
3. ಎಲ್ಲಾ ಜಿಲ್ಲಾಧಿಕಾರಿಗಳು ಮತ್ತು ಎಲ್ಲಾ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು
4. ಎಲ್ಲಾ ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಹಣಾಧಿಕಾರಿಗಳು
5. ಎಲ್ಲಾ ಆಯ್ಕೆ ಸಮಿತಿಯ ಸದಸ್ಯರು
6. ಎಲ್ಲಾ ಜಿಲ್ಲಾ ಉಪನಿರ್ದೇಶಕರುಗಳು ಮತ್ತು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಮಹಿಳಾ ಮತ್ತು ಮಕ್ಕಳ ಅಬಿವೃದ್ಧಿ ಇಲಾಖೆ
7. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

(ಕ್ರಮ ಸಂಖ್ಯೆ: 3 ರಿಂದ 6 ನಿರ್ದೇಶನಾಲಯದ ಮುಖಾಂತರ)

<u>ಪ್ರತಿಯನ್ನು ಮಾಹಿತಿಗಾಗಿ:</u>

ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಆಪ್ತಕಾರ್ಯದರ್ಶಿ.

## ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ:** ಅನುಕಂಪದ ಆಧಾರದಲ್ಲಿ ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರ ಹುದ್ದೆಗೆ ಗುರುತಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ ಮಮಇ: 237 ಐಸಿಡಿ 2012 ದಿನಾಂಕ 15.06.2012
2) ಸರ್ಕಾರದ ಆದೇಶ ಸಂಖ್ಯೆ ಮಮಇ: 89 ಐಸಿಡಿ, ದಿನಾಂಕ 19.04.2014
3) ಸರ್ಕಾರದ ತಿದ್ದುಪಡಿ ಆದೇಶ ಮಮಇ 218 ಐಸಿಡಿ 2015 ದಿನಾಂಕ 02.07.2016
4) ಸರ್ಕಾರದ ಸೇರ್ಪಡೆ ಆದೇಶ ಸಂಖ್ಯೆ ಮಮಇ 158 ಐಸಿಡಿ 2017 ದಿ: 19.04.2017
5) ಸರ್ಕಾರದ ತಿದ್ದುಪಡಿ ಆದೇಶ ಮಮಇ 235 ಐಸಿಡಿ 2017 ದಿನಾಂಕ 02.08.2017
6) ಸರ್ಕಾರದ ಆದೇಶ ಸಂಖ್ಯೆ ಮಮಇ: 303 ಐಸಿಡಿ 2017 ದಿನಾಂಕ 23.09.2017
7) ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಏಕ ಕಡತ ಸಂಖ್ಯೆ: ಡಿಡಬ್ಲ್ಯುಸಿ/ಐಸಿಡಿ/ಎಎನ್‌ಜಿ-1/16/2018-19, ದಿನಾಂಕ 14.11.2018.

**ಪ್ರಸ್ತಾವನೆ:**

ರಾಜ್ಯದಲ್ಲಿನ ಅಂಗನವಾಡಿ ಕೇಂದ್ರಗಳಿಗೆ ಅಂಗನವಾಡಿ ಕಾರ್ಯಕರ್ತೆಯರ / ಸಹಾಯಕಿಯರನ್ನು ಆಯ್ಕೆ ಮಾಡಲು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಆಯ್ಕೆ ಸಮಿತಿಯನ್ನು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ 15.06.2012ರ ಆದೇಶದಲ್ಲಿ ರಚಿಸಿ ಮಾರ್ಗಸೂಚಿಗಳನ್ನು ಹೊರಡಿಸಲಾಗಿತ್ತು ಹಾಗು ಸದರಿ ಮಾರ್ಗ ಸೂಚಿಗಳನ್ನು ಉಲ್ಲೇಖ (2) ರಲ್ಲಿ ಓದಲಾದ ದಿನಾಂಕ 19.04.2014 ರ ಆದೇಶದಲ್ಲಿ ಪರಿಷ್ಕರಿಸಲಾಗಿತ್ತು.

ಅಂಗನವಾಡಿ ಕಾರ್ಯಕರ್ತೆಯರ / ಸಹಾಯಕಿಯರನ್ನು ಆಯ್ಕೆ ಮಾಡಲು ಹೊರಡಿಸಲಾದ ಆದೇಶಗಳಿಗೆ ಕ್ರಮ ಸಂಖ್ಯೆ (3) ರಿಂದ (6) ರಲ್ಲಿ ಓದಲಾದ ಆದೇಶಗಳಲ್ಲಿ ಕೆಲವು ಸೇರ್ಪಡೆ ಮತ್ತು ತಿದ್ದುಪಡಿಗಳನ್ನು ಮಾಡಿರುವುದರಿಂದ ಅವುಗಳನ್ನು ಅಳವಡಿಸಿಕೊಂಡು ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕಿಯರ ನೇಮಕಾತಿಯನ್ನು ಆನ್‌ಲೈನ್ ಮುಖಾಂತರ ಮಾಡಲು ಅನುಕೂಲವಾಗುವಂತೆ ಮಾರ್ಗಸೂಚಿಗಳನ್ನು ಪರಿಷ್ಕರಿಸಿ ಆದೇಶಿಸಿದೆ.

ಮೇಲೆ ಓದಲಾದ (6)ರ ಸರ್ಕಾರದ ಆದೇಶದಲ್ಲಿ ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರ ಆಯ್ಕೆ ಮಾಡಲು ಹೊರಡಿಸಲಾದ ಮಾರ್ಗಸೂಚಿ ಕ್ರಮಸಂಖ್ಯೆ VIII ರಲ್ಲಿ ಸೇವೆಯಲ್ಲಿರುವವರು ಮರಣ ಹೊಂದಿದ ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರ ಅವಿವಾಹಿತ ಮಗಳಿಗೂ ಅವರ ತಾಯಿಯು ನಿರ್ವಹಿಸುತ್ತಿದ್ದ ಹುದ್ದೆಗೆ ಅನುಕಂಪದ ಆಧಾರದಲ್ಲಿ ಇತರೆ ಕುಟುಂಬ ಸದಸ್ಯರಿಂದ ನಿರಾಕ್ಷೇಪಣ ಪತ್ರವನ್ನು ಪಡೆದು ನೇಮಕ ಮಾಡಿಕೊಳ್ಳಲು ಅವಕಾಶ ಕಲ್ಪಿಸಲಾಗಿರುತ್ತದೆ. ಮುಂದುವರೆದು, ಮೃತ ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರ ವಿವಾಹಿತ / ವಿಚ್ಛೇದಿತ ಮಗಳಿಗೂ ಸಹ ಅನುಕಂಪದ ಆಧಾರದ ನೇಮಕಾತಿಯಲ್ಲಿ ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಹುದ್ದೆಗೆ ಗುರುತಿಸುವ ಕುರಿತು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ಏಕ ಕಡತದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 308 ಐಸಿಡಿ 2018, ಬೆಂಗಳೂರು, ದಿನಾಂಕ: 02.02.2019**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಅಂಗನವಾಡಿ ಕಾರ್ಯಕರ್ತೆ/ ಸಹಾಯಕಿಯರು ಸೇವೆಯಲ್ಲಿರುವಾಗಲೇ ಮರಣ ಹೊಂದಿದರೆ ಅವರ ವಿವಾಹಿತ / ವಿಚ್ಛೇದಿತ ಮಗಳಿಗೂ ಅನುಕಂಪದ ಆಧಾರದ ನೇಮಕಾತಿ ಮಾಡಿಕೊಳ್ಳಲು ಅನುಮತಿ ನೀಡಿ ಆದೇಶಿಸಿದೆ. ಉಳಿದಂತೆ ಹಾಲಿ ಜಾರಿಯಲ್ಲಿರುವ ಮಾರ್ಗಸೂಚಿಗಳು ಮುಂದುವರೆಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

(ಸಂಧ್ಯಾ ಎಲ್. ನಾಯಕ್)
ಸರ್ಕಾರದ ಅಧೀನ ಕಾರ್ಯದರ್ಶಿ -1
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.

ಸಂಕಲನಕಾರರು, ಕರ್ನಾಟಕ ರಾಜ್ಯ ಪತ್ರ, ಬೆಂಗಳೂರು – ಇವರಿಗೆ ಮುಂದಿನ ಸಂಚಿಕೆಯಲ್ಲಿ ಪ್ರಕಟಿಸುವಂತೆ ಹಾಗೂ 500 ಪ್ರತಿಗಳನ್ನು ಒದಗಿಸುವಂತೆ ಕೋರಿದೆ

**ಇವರಿಗೆ:-**

1. ಪ್ರಧಾನ ಮಹಾಲೇಖಪಾಲರು (ಎ & ಇ), ಕರ್ನಾಟಕ, ಪಾರ್ಕ್‌ಹೌಸ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ:5329, ಬೆಂಗಳೂರು-560 001.
2. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು.
3. ಎಲ್ಲಾ ಜಿಲ್ಲಾಧಿಕಾರಿಗಳು ಮತ್ತು ಎಲ್ಲಾ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು
4. ಎಲ್ಲಾ ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಹಣಾಧಿಕಾರಿಗಳು
5. ಎಲ್ಲಾ ಆಯ್ಕೆ ಸಮಿತಿಯ ಸದಸ್ಯರು
6. ಎಲ್ಲಾ ಜಿಲ್ಲಾ ಉಪನಿರ್ದೇಶಕರುಗಳು ಮತ್ತು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ
7. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

(ಕ್ರಮ ಸಂಖ್ಯೆ: 3 ರಿಂದ 6 ನಿರ್ದೇಶನಾಲಯದ ಮುಖಾಂತರ)

**ಪ್ರತಿಯನ್ನು ಮಾಹಿತಿಗಾಗಿ:**

1. ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಆಪ್ತ ಕಾರ್ಯದರ್ಶಿ, ಬೆಂಗಳೂರು.

ಕರ್ನಾಟಕ ಸರ್ಕಾರ

ಸಂ.ಮಮಇ 303 ಐಸಿಡಿ 2017

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ:15.06.2020

**ತಿದ್ದುಪಡಿ ಆದೇಶ**

ಸರ್ಕಾರದ ಆದೇಶ ಸಂ.ಮಮಇ:303:ಐಸಿಡಿ:2017, ದಿ:23.09.2017 ಮತ್ತು ತಿದ್ದುಪಡಿ ಆದೇಶ ದಿ:19.1.2019ರಲ್ಲಿ ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರ ಆಯ್ಕೆ ಮಾರ್ಗಸೂಚಿಗಳನ್ನು ಮತ್ತು ಅರ್ಹತೆಯ ಮಾನದಂಡಗಳನ್ನು ತಿಳಿಸಿ ಆದೇಶಿಸಿದೆ. ಸದರಿ ಮಾರ್ಗಸೂಚಿಗಳಲ್ಲಿ ಈ ಕೆಳಕಂಡ ಅಂಶಗಳಿಗೆ ತಿದ್ದುಪಡಿ ಮಾಡಿ ಆದೇಶಿಸಲಾಗಿದೆ.

| ಕ್ರಸಂ. | ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರ ಆಯ್ಕೆ ಮಾರ್ಗಸೂಚಿಗಳು ಮತ್ತು ಅರ್ಹತೆ ಮಾನದಂಡಗಳು ದಿ:23.9.2017ರ ಆದೇಶ ಮತ್ತು ತಿದ್ದುಪಡಿ ಆದೇಶ ದಿ:19..01.2019ರ ಆದೇಶದಲ್ಲಿರುವುದು | ತಿದ್ದುಪಡಿ ಮಾಡಲಾಗಿರುವುದು |
|---|---|---|
| 1 | ಅಂಗನವಾಡಿ ಕಾರ್ಯಕರ್ತೆ ಹುದ್ದೆ ಖಾಲಿಯಿರುವ/ ಹೊಸ ಕೇಂದ್ರ ಪ್ರಾರಂಭಿಸುತ್ತಿರುವ ಗ್ರಾಮದಲ್ಲಿ ವಾಸಿಸುತ್ತಿರುವ ಸಹಾಯಕಿಯರಿದ್ದು, ಅವರು ಎಸ್.ಎಸ್.ಎಲ್.ಸಿ. ಉತ್ತೀರ್ಣರಾಗಿದ್ದು, ಕನಿಷ್ಠ 3 ವರ್ಷ ಸೇವೆ ಸಲ್ಲಿಸಿದ್ದು, **45 ವರ್ಷವಯೋಮಿತಿಯೊಳಗಿದ್ದು**, ಆ ಅಂಗನವಾಡಿ ಕೇಂದ್ರದಿಂದ 3 ಕಿ.ಮೀ. ವ್ಯಾಪ್ತಿಯೊಳಗೆ ವಾಸಿಸುತ್ತಿದ್ದು, ಕಾರ್ಯಕರ್ತೆ ಹುದ್ದೆಗೆ ಅರ್ಜಿ ಸಲ್ಲಿಸಿದಲ್ಲಿ ಆ ಅಂಗನವಾಡಿ ಕೇಂದ್ರಕ್ಕೆ ಕಾರ್ಯಕರ್ತೆ ಹುದ್ದೆಗೆ ಬೇರ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸುವ ಪ್ರಮೇಯವಿರುವುದಿಲ್ಲ. ಸದರಿ ಸಹಾಯಕಿಯನ್ನೇ ಕಾರ್ಯಕರ್ತೆ ಹುದ್ದೆಗೆ ಆಯ್ಕೆ ಮಾಡತಕ್ಕದ್ದು. ಈ ಬಗ್ಗೆ ಶಿಶು ಅಭಿವೃದ್ಧಿ ಯೋಜನಾಧಿಕಾರಗಳು ಆಯ್ಕೆ ಸಮಿತಿಯ ಅಧ್ಯಕ್ಷರಿಗೆ ಪ್ರಸ್ತಾವನೆಯನ್ನು ಸಲ್ಲಿಸಿ ಅನುಮೋದನೆ ಪಡೆದು ಆದೇಶ ಹೊರಡಿಸತಕ್ಕದ್ದು | ಅಂಗನವಾಡಿ ಕಾರ್ಯಕರ್ತೆ ಹುದ್ದೆ ಖಾಲಿ ಇರುವ / ಹೊಸ ಕೇಂದ್ರ ಪ್ರಾರಂಭಿಸುತ್ತಿರುವ ಗ್ರಾಮದ ಯೋಜನಾ ವ್ಯಾಪ್ತಿಯಲ್ಲಿ ವಾಸಿಸುತ್ತಿರುವ **ಮಿನಿ ಅಂಗನವಾಡಿ ಕಾರ್ಯಕರ್ತೆಯರಿದ್ದಲ್ಲಿ**, ಅವರು ಆ ಅಂಗನವಾಡಿ ಕೇಂದ್ರದಿಂದ 3 ಕಿ.ಮೀ. ವ್ಯಾಪ್ತಿಯೊಳಗೆ ವಾಸಿಸುತ್ತಿದ್ದು, ಕಾರ್ಯಕರ್ತೆ ಹುದ್ದೆಗೆ ಅರ್ಜಿ ಸಲ್ಲಿಸಿದ್ದಲ್ಲಿ ಆ ಅಂಗನವಾಡಿ ಕೇಂದ್ರದ ಕಾರ್ಯಕರ್ತೆ ಹುದ್ದೆಗೆ ಬೇರೆ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸದೆ, ಆದ್ಯತೆ ಮೇರೆಗೆ ಸದರಿ ಮಿನಿ ಅಂಗನವಾಡಿ ಕಾರ್ಯಕರ್ತೆಯನ್ನು ಸಾಮಾನ್ಯ ಅಂಗನವಾಡಿ ಕಾರ್ಯಕರ್ತೆ ಹುದ್ದೆಗೆ ಆಯ್ಕೆ ಮಾಡತಕ್ಕದ್ದು ಹಾಗು 3 ಕಿ.ಮೀ. ವ್ಯಾಪ್ತಿಯಲ್ಲಿ ವಾಸಿಸುತ್ತಿರುವ ಎಸ್.ಎಸ್.ಎಲ್.ಸಿ ಉತ್ತೀರ್ಣರಾದ, ಅರ್ಹ ಸಹಾಯಕಿಯರಿದ್ದಲ್ಲಿ ಎರಡನೇ ಆದ್ಯತೆ ನೀಡತಕ್ಕದ್ದು. ಈ ಬಗ್ಗೆ ಶಿಶುಅಭಿವೃದ್ಧಿ ಯೋಜನಾಧಿಕಾರಿಗಳು ಆಯ್ಕೆ ಸಮಿತಿಯ ಅಧ್ಯಕ್ಷರಿಗೆ ಪ್ರಸ್ತಾವನೆಯನ್ನು ಸಲ್ಲಿಸಿ ಅನುಮೋದನೆ ಪಡೆದು ಆದೇಶ ಹೊರಡಿಸತಕ್ಕದ್ದು. |
| 2 | ಅಂಗನವಾಡಿ ಕಾರ್ಯಕರ್ತೆ ಹುದ್ದೆ ಖಾಲಿಯಿರುವ/ಹೊಸ ಕೇಂದ್ರ ಪ್ರಾರಂಭಿಸುತ್ತಿರುವ ಗ್ರಾಮದಲ್ಲಿ ವಾಸಿಸುತ್ತಿರುವ ಸಹಾಯಕಿಯರಿದ್ದು, ಅವರು ಎಸ್.ಎಸ್.ಎಲ್.ಸಿ. ಉತ್ತೀರ್ಣರಾಗಿದ್ದು, ಕನಿಷ್ಠ 3 ವರ್ಷ ಸೇವೆ ಸಲ್ಲಿಸಿದ್ದು, **45 ವರ್ಷ** | ಅಂಗನವಾಡಿ ಕಾರ್ಯಕರ್ತೆ ಹುದ್ದೆ ಖಾಲಿ ಇರುವ /ಹೊಸ ಕೇಂದ್ರ ಪ್ರಾರಂಭಿಸುತ್ತಿರುವ ಗ್ರಾಮದ ಯೋಜನಾ ವ್ಯಾಪ್ತಿಯಲ್ಲಿ ವಾಸಿಸುತ್ತಿರುವ **ಮಿನಿ ಅಂಗನವಾಡಿ ಕಾರ್ಯಕರ್ತೆ ಯರಿದ್ದಲ್ಲಿ, 50 ವರ್ಷ ವಯೋಮಿತಿ ಯೊಳಗಿದ್ದು, ಕನಿಷ್ಠ 3 ವರ್ಷ ಸೇವೆ ಸಲ್ಲಿಸಿದ್ದು**, ಅವರು ಆ ಅಂಗನವಾಡಿ |

|  |  |  |
| --- | --- | --- |
|  | ವಯೋಮಿತಿಯೊಳಗಿದ್ದು, ಆ ಅಂಗನವಾಡಿ ಕೇಂದ್ರದಿಂದ 3 ಕಿ.ಮೀ. ವ್ಯಾಪ್ತಿಯೊಳಗೆ ವಾಸಿಸುತ್ತಿದ್ದು, ಕಾರ್ಯಕರ್ತೆ ಹುದ್ದೆಗೆ ಅರ್ಜಿ ಸಲ್ಲಿಸಿದಲ್ಲಿ ಆ ಅಂಗನವಾಡಿ ಕೇಂದ್ರಕ್ಕೆ ಕಾರ್ಯಕರ್ತೆ ಹುದ್ದೆಗೆ ಬೇರೆ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸುವ ಪ್ರಮೇಯವಿರುವುದಿಲ್ಲ. ಸದರಿ ಸಹಾಯಕಿಯನ್ನೇ ಕಾರ್ಯಕರ್ತೆ ಹುದ್ದೆಗೆ ಆಯ್ಕೆ ಮಾಡತಕ್ಕದ್ದು. ಈ ಬಗ್ಗೆ ಶಿಶುಅಭಿವೃದ್ಧಿಯೋಜನಾಧಿಕಾರಿಗಳು ಆಯ್ಕೆ ಸಮಿತಿಯ ಅಧ್ಯಕ್ಷರಿಗೆ ಪ್ರಸ್ತಾವನೆಯನ್ನು ಸಲ್ಲಿಸಿ ಅನುಮೋದನೆ ಪಡೆದು ಆದೇಶ ಹೊರಡಿಸತಕ್ಕದ್ದು | ಕೇಂದ್ರದಿಂದ 3 ಕಿ.ಮೀ. ವ್ಯಾಪ್ತಿಯೊಳಗೆ ವಾಸಿಸುತ್ತಿದ್ದು, ಕಾರ್ಯಕರ್ತೆ ಹುದ್ದೆಗೆ ಅರ್ಜಿ ಸಲ್ಲಿಸಿದ್ದಲ್ಲಿ ಆ ಅಂಗನವಾಡಿ ಕೇಂದ್ರದ ಕಾರ್ಯಕರ್ತೆ ಹುದ್ದೆಗೆ ಬೇರೆ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸದೆ, ಆದ್ಯತೆ ಮೇರೆಗೆ ಸದರಿ ಮಿನಿ ಅಂಗನವಾಡಿ ಕಾರ್ಯಕರ್ತೆಯನ್ನು ಸಾಮಾನ್ಯ ಅಂಗನವಾಡಿ ಕಾರ್ಯಕರ್ತೆ ಹುದ್ದೆಗೆ ಆಯ್ಕೆ ಮಾಡತಕ್ಕದ್ದು . ಹಾಗು ಹುದ್ದೆ ಖಾಲಿ ಇರುವ ಅಂಗನವಾಡಿ ಕೇಂದ್ರದ ಯೋಜನಾ ವ್ಯಾಪ್ತಿಯಲ್ಲಿ 3 ಕಿ.ಮೀ. ವ್ಯಾಪ್ತಿಯಲ್ಲಿ ವಾಸಿಸುತ್ತಿರುವ ಎಸ್.ಎಸ್.ಎಲ್.ಸಿ ಉತ್ತೀರ್ಣರಾದ, ಕನಿಷ್ಠ 3ವರ್ಷ ಸೇವೆ ಸಲ್ಲಿಸಿದ್ದು, 50 ವರ್ಷ ವಯೋಮಿತಿಯೊಳಗಿರುವ ಸಾಮಾನ್ಯ ಅಂಗನವಾಡಿ ಕೇಂದ್ರದ ಅರ್ಹ ಸಹಾಯಕಿಯರಿದ್ದಲ್ಲಿ ಎರಡನೇ ಆದ್ಯತೆ ನೀಡತಕ್ಕದ್ದು. ಈ ಬಗ್ಗೆ ಶಿಶುಅಭಿವೃದ್ಧಿ ಯೋಜನಾಧಿಕಾರಿಗಳು ಆಯ್ಕೆ ಸಮಿತಿಯ ಅಧ್ಯಕ್ಷರಿಗೆ ಪ್ರಸ್ತಾವನೆಯನ್ನು ಸಲ್ಲಿಸಿ ಅನುಮೋದನೆ ಪಡೆದು ಆದೇಶ ಹೊರಡಿಸತಕ್ಕದ್ದು. |

(ಜಿ ಹೆಚ್ ಸರೋಜಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ-I
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರೀಕರ ಸಬಲೀಕರಣ ಇಲಾಖೆ.

ಇವರಿಗೆ:-

1. ಪ್ರಧಾನ ಮಹಾಲೇಖಪಾಲರು (ಎ & ಇ), ಕರ್ನಾಟಕ, ಪಾರ್ಕ್‌ಹೌಸ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ:5329. ಬೆಂಗಳೂರು-560 001.
2. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು.
3. ಎಲ್ಲಾ ಜಿಲ್ಲಾಧಿಕಾರಿಗಳು ಮತ್ತು ಎಲ್ಲಾ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು
4. ಎಲ್ಲಾ ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಹಣಾಧಿಕಾರಿಗಳು
5. ಎಲ್ಲಾ ಆಯ್ಕೆ ಸಮಿತಿಯ ಸದಸ್ಯರು
6. ಎಲ್ಲಾ ಜಿಲ್ಲಾ ಉಪನಿರ್ದೇಶಕರುಗಳು ಮತ್ತು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಮಹಿಳಾ ಮತ್ತು ಮಕ್ಕಳ ಅಬಿವೃದ್ಧಿ ಇಲಾಖೆ
7. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

(ಕ್ರಮ ಸಂಖ್ಯೆ: 3 ರಿಂದ 6 ನಿರ್ದೇಶನಾಲಯದ ಮುಖಾಂತರ)

ಪ್ರತಿಯನ್ನು ಮಾಹಿತಿಗಾಗಿ:

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಆಪ್ತಕಾರ್ಯದರ್ಶಿ.

**ಕರ್ನಾಟಕ ಸರ್ಕಾರ**

ಸಂಖ್ಯೆ: ಮಮಇ 152 ಐಸಿಡಿ 2021

ಕರ್ನಾಟಕ ಸರ್ಕಾರ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:01.06.2021.

**ತಿದ್ದುಪಡಿ ಆದೇಶ**

ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕಿಯರ ನೇಮಕಾತಿಗೆ ಸಂಬಂಧಿಸಿದಂತೆ ಹೊರಡಿಸಲಾಗಿರುವ ಸರ್ಕಾರದ ಆದೇಶ ಸಂಖ್ಯೆ:ಮಮಇ 303 ಐಸಿಡಿ 2017, ದಿನಾಂಕ:23.09.2017ರ ಮಾರ್ಗಸೂಚಿ V ರ ಆನ್‌ಲೈನ್ ಅರ್ಜಿಯೊಂದಿಗೆ ಲಗತ್ತಿಸಬೇಕಾದ ದಾಖಲೆಗಳು ಇದರ ಕ್ರ.ಸಂ. (4 ರಲ್ಲಿ) **ತಹಸೀಲ್ದಾರ್ / ಉಪ ತಹಸೀಲ್ದಾರ್ ರವರಿಂದ ಪಡೆದ ಒಂದು ವರ್ಷದೊಳಗಿನ ವಾಸಸ್ಥಳ ದೃಢೀಕರಣ ಪತ್ರ** ಎಂಬುದರ ಬದಲಾಗಿ **ತಹಸೀಲ್ದಾರ್ / ಉಪ ತಹಸೀಲ್ದಾರ್‌ರವರಿಂದ ಪಡೆದ ಮೂರು ವರ್ಷದೊಳಗಿನ ವಾಸಸ್ಥಳ ದೃಢೀಕರಣ ಪತ್ರ** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.



ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

(ಜಿ.ಹೆಚ್. ಸರೋಜಮ್ಮ) 01/06/2021
ಸರ್ಕಾರದ ಅಧೀನ ಕಾರ್ಯದರ್ಶಿ-1(ಪ್ರ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ
ಸಬಲೀಕರಣ ಇಲಾಖೆ.

ಸಂಕಲನಕಾರರು, ಕರ್ನಾಟಕ ರಾಜ್ಯ ಪತ್ರ, ಬೆಂಗಳೂರು - ಇವರಿಗೆ ಮುಂದಿನ ಸಂಚಿಕೆಯಲ್ಲಿ ಪ್ರಕಟಿಸುವಂತೆ ಹಾಗೂ 500 ಪ್ರತಿಗಳನ್ನು ಈ ಇಲಾಖೆಗೆ ಒದಗಿಸುವಂತೆ ಕೋರಲಾಗಿದೆ.

**ಇವರಿಗೆ:**

1. ಪ್ರಧಾನ ಮಹಾಲೇಖಪಾಲರು (ಎ & ಇ), ಕರ್ನಾಟಕ, ಪಾರ್ಕ್ ಹೌಸ್ ರಸ್ತೆ, ಅಂಚೆ ಪಟ್ಟಿಗೆ ಸಂಖ್ಯೆ: 5329, ಬೆಂಗಳೂರು-560 001.
2. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು.
3. ಎಲ್ಲಾ ಜಿಲ್ಲಾಧಿಕಾರಿಗಳು ಮತ್ತು ಎಲ್ಲಾ ಜಿಲ್ಲಾ ಪಂಚಾಯತ್ ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು.
4. ಎಲ್ಲಾ ತಾಲ್ಲೂಕು ಪಂಚಾಯತ್ ನ ಕಾರ್ಯನಿರ್ವಹಣಾಧಿಕಾರಿಗಳು.
5. ಎಲ್ಲಾ ಆಯ್ಕೆ ಸಮಿತಿಯ ಸದಸ್ಯರು.
6. ಎಲ್ಲಾ ಜಿಲ್ಲಾ ಉಪ ನಿರ್ದೇಶಕರುಗಳು ಮತ್ತು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.
7. ಶಾಖಾ ರಕ್ಷಾ ಕಡತ/ ಹೆಚ್ಚುವರಿ ಪ್ರತಿಗಳು.

(ಕ್ರಮ ಸಂಖ್ಯೆ: 03 ರಿಂದ 06 ನಿರ್ದೇಶನಾಲಯದ ಮುಖಾಂತರ)

**ಪ್ರತಿಯನ್ನು ಮಾಹಿತಿಗಾಗಿ:**

1. ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರ ಆಪ್ತ ಕಾರ್ಯದರ್ಶಿ, ವಿಕಾಸಸೌಧ, ಬೆಂಗಳೂರು
2. ಸರ್ಕಾರದ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಆಪ್ತ ಕಾರ್ಯದರ್ಶಿ.



ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 640 |
| ಸದಸ್ಯರ ಹೆಸರು | : | ಶ್ರೀ ಪುಟ್ಟರಂಗಶೆಟ್ಟಿ ಸಿ |
| ಉತ್ತರಿಸುವ ದಿನಾಂಕ | : | 18/02/2022 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು. |

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ರಾಜ್ಯದ ಪೌರಾಡಳಿತ ನಿರ್ದೇಶನಾಲಯಕ್ಕೆ ಮಂಜೂರು ಮಾಡಲಾಗಿರುವ ವಿವಿಧ ದರ್ಜೆಯ ಹುದ್ದೆಗಳೆಷ್ಟು; ಭರ್ತಿಯಾಗಿರುವ ಹುದ್ದೆಗಳೆಷ್ಟು; (ದರ್ಜೆವಾರು ಸಂಪೂರ್ಣ ವಿವರ ನೀಡುವುದು)</td><td>ಪೌರಾಡಳಿತ ನಿರ್ದೇಶನಾಲಯದಲ್ಲಿ ಮಂಜೂರು ಮಾಡಲಾಗಿರುವ ವಿವಿಧ ದರ್ಜೆಯ ಹುದ್ದೆಗಳ ವಿವರ ಈ ಕೆಳಗಿನಂತಿದೆ:<br><table><tr><td>ವೃಂದ</td><td>ಎ</td><td>ಬಿ</td><td>ಸಿ</td><td>ಡಿ</td><td>ಒಟ್ಟು</td></tr><tr><td>ಮಂಜೂರಾದ ಸಂಖ್ಯೆ</td><td>30</td><td>18</td><td>128</td><td>25</td><td>201</td></tr></table></td></tr>
<tr><td>ಆ)</td><td>ಹಾಗಿದ್ದಲ್ಲಿ, ಪ್ರಸ್ತುತ ಈ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳ ಸಂಖ್ಯೆ: ಎಷ್ಟು; (ದರ್ಜೆವಾರು ವಿವರ ನೀಡುವುದು)</td><td>ಪ್ರಸ್ತುತ ಪೌರಾಡಳಿತ ನಿರ್ದೇಶನಾಲಯದಲ್ಲಿ ಖಾಲಿ ಇರುವ ಹುದ್ದೆಗಳ ವಿವರ ಈ ಕೆಳಗಿನಂತಿದೆ:<br><table><tr><td>ವೃಂದ</td><td>ಎ</td><td>ಬಿ</td><td>ಸಿ</td><td>ಡಿ</td><td>ಒಟ್ಟು</td></tr><tr><td>ಖಾಲಿ ಹುದ್ದೆ ಸಂಖ್ಯೆ</td><td>10</td><td>04</td><td>53</td><td>3</td><td>70</td></tr></table></td></tr>
<tr><td>ಇ)</td><td>ಗ್ರಾಮ ಪಂಚಾಯತಿಗಳನ್ನು ಪಟ್ಟಣ ಪಂಚಾಯತಿಗೆ ಮೇಲ್ದರ್ಜೆಗೇರಿಸಲು ಇರುವ ಮಾನದಂಡಗಳೇನು; (ಸಂಪೂರ್ಣ ವಿವರ ಹಾಗೂ ಆದೇಶದ ಪ್ರತಿಯನ್ನು ನೀಡುವುದು)</td><td>ಗ್ರಾಮ ಪಂಚಾಯಿತಿಗಳನ್ನು ಪಟ್ಟಣ ಪಂಚಾಯಿತಿಗಳನ್ನಾಗಿ ಮೇಲ್ದರ್ಜೆಗೇರಿಸಲು ಕರ್ನಾಟಕ ಪುರಸಭೆಗಳ ಅಧಿನಿಯಮ 1964ರ ಕಲಂ 349 ರನ್ವಯ ಕೆಳಕಂಡ ಮಾನದಂಡಗಳನ್ನು ಅನುಸರಿಸಲಾಗುವುದು.<br>1. ಆ ಗ್ರಾಮ ಪಂಚಾಯಿತಿಯ ಪ್ರದೇಶದ ಜನಸಂಖ್ಯೆ 10,000 ಕ್ಕೆ ಕಡಿಮೆ ಇಲ್ಲದಂತೆ ಹಾಗೂ 20,000 ಕ್ಕೆ ಹೆಚ್ಚಿಲ್ಲದಂತಿರಬೇಕು,<br>2. ಅಂತಹ ಪ್ರದೇಶದ ಜನಸಂಖ್ಯೆಯ ಜನಸಾಂದ್ರತೆಯು ಆ ಪ್ರದೇಶದ ಒಂದು ಚದರ ಕಿ.ಮೀ. ವಿಸ್ತೀರ್ಣಕ್ಕೆ 400 ಕ್ಕಿಂತ ಕಡಿಮೆ ಇಲ್ಲದಿರುವುದು,<br>3. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗಾವಕಾಶಗಳ ಶೇಕಡಾವಾರು ಪ್ರಮಾಣವು ಒಟ್ಟು ಉದ್ಯೋಗದ ಪ್ರಮಾಣಕ್ಕಿಂತ ಶೇ.50 ಕ್ಕಿಂತ ಕಡಿಮೆ ಇಲ್ಲದಿರುವುದು.<br><br>ಅಲ್ಲದೇ, ಅಂಥ ಪ್ರದೇಶದಲ್ಲಿ ತಾಲ್ಲೂಕು ಕೇಂದ್ರ ಸ್ಥಾನವಿದ್ದಲ್ಲಿ, ಅದು 10,000 ಕ್ಕಿಂತ ಕಡಿಮೆ ಜನಸಂಖ್ಯೆಯನ್ನು ಹೊಂದಿದ್ದರೂ ಸಹ ಪಟ್ಟಣ ಪಂಚಾಯಿತಿಯಾಗಿ ಪರಿವರ್ತಿಸಲು ಅವಕಾಶವಿರುತ್ತದೆ.</td></tr>
</table>

| | | |
|---|---|---|
| | | ಮುಂದುವರೆದು, ದಿ:19.03.2015 ರ ಸಚಿವ ಸಂಪುಟದ ನಿರ್ಣಯದನ್ವಯ 15,000 ಕ್ಕಿಂತ ಹೆಚ್ಚಿನ ಜನಸಂಖ್ಯೆ ಹೊಂದಿರುವ ಪ್ರಕರಣಗಳನ್ನು ಮಾತ್ರ ಪಟ್ಟಣ ಪಂಚಾಯಿತಿಯಾಗಿ ಮೇಲ್ದರ್ಜೆಗೇರಿಸಲು ಕ್ರಮವಹಿಸಲಾಗುತ್ತಿದೆ.<br><br>ಮೇಲೆ ವಿವರಿಸಿದ ಮಾನದಂಡಗಳನ್ವಯ ಅರ್ಹತೆಯಿದ್ದಲ್ಲಿ ಪಟ್ಟಣ ಪಂಚಾಯತಿಗಳನ್ನಾಗಿ ಮೇಲ್ದರ್ಜೆಗೇರಿಸಲು ಕ್ರಮವಹಿಸಲಾಗುತ್ತಿದೆ. |
| ಈ) | ರಾಜ್ಯದಲ್ಲಿ ಮೇಲ್ದರ್ಜೆಗೇರಿಸಿದ ಪಟ್ಟಣ ಪಂಚಾಯತಿಗಳ ಸಂಖ್ಯೆ ಎಷ್ಟು; ಪಟ್ಟಣ ಪಂಚಾಯತಿಗಳನ್ನು ಮೇಲ್ದರ್ಜೆಗೇರಿಸಲು ಅನುಸರಿಸಲಾಗುತ್ತಿರುವ ಮಾರ್ಗಸೂಚಿಗಳೇನು; | ರಾಜ್ಯದಲ್ಲಿ 2021-22ನೇ ಸಾಲಿನಲ್ಲಿ 1 ಪಟ್ಟಣ ಪಂಚಾಯಿತಿಯಾಗಿ ಹಾಗೂ 2020-21 ನೇ ಸಾಲಿನಲ್ಲಿ 26 ಪಟ್ಟಣ ಪಂಚಾಯಿತಿಗಳನ್ನಾಗಿ ಮೇಲ್ದರ್ಜೆಗೇರಿಸಲಾಗಿದೆ.<br><br>ಒಟ್ಟಾರೆಯಾಗಿ 2011ರ ಜನಗಣತಿಯನುಸಾರ ಇದುವರೆವಿಗೂ 73 ಪಟ್ಟಣ ಪಂಚಾಯತಿಗಳನ್ನಾಗಿ ಮೇಲ್ದರ್ಜೆಗೇರಿಸಲಾಗಿದ್ದು, ಅದರಲ್ಲಿ ಬೆಂಗಳೂರು ನಗರ ಜಿಲ್ಲೆಯ ದೊಡ್ಡತೋಗೂರು ಮತ್ತು ರಾಯಚೂರು ಜಿಲ್ಲೆಯ ಜಾಲಹಳ್ಳಿ ಪಟ್ಟಣ ಪಂಚಾಯಿತಿಗಳ ಅಧಿಸೂಚನೆಗಳಿಗೆ ಮಾನ್ಯ ಉಚ್ಚ ನ್ಯಾಯಾಲಯದಿಂದ ತಡೆಯಾಜ್ಞೆ ಇರುತ್ತದೆ.<br><br>ಪಟ್ಟಣ ಪಂಚಾಯಿತಿಗಳನ್ನು ಪುರಸಭೆಗಳನ್ನಾಗಿ ಮೇಲ್ದರ್ಜೆಗೇರಿಸಲು ಕರ್ನಾಟಕ ಪೌರಸಭೆಗಳ ಅಧಿನಿಯಮ 1964ರ ನಿಯಮ 3(1), 3(2) ಮತ್ತು 9 ಗಳನ್ವಯ ಈ ಕೆಳಕಂಡ ಮಾನದಂಡಗಳನ್ನು ಅನುಸರಿಸಲಾಗುವುದು.<br>1. ಆ ಪಟ್ಟಣ ಪಂಚಾಯಿತಿಯ ಪ್ರದೇಶದ ಜನಸಂಖ್ಯೆ 20,000 ಕ್ಕೆ ಕಡಿಮೆ ಇಲ್ಲದಂತೆ ಹಾಗೂ 50,000 ಕ್ಕಿಂತ ಹೆಚ್ಚಿಲ್ಲದಂತಿರಬೇಕು,<br>2. ಅಂತಹ ಪ್ರದೇಶದ ಜನಸಂಖ್ಯೆಯ ಜನಸಾಂದ್ರತೆಯು ಆ ಪ್ರದೇಶದ ಒಂದು ಚದರ ಕಿ.ಮೀ. ವಿಸ್ತೀರ್ಣಕ್ಕೆ 1500 ಕ್ಕಿಂತ ಕಡಿಮೆ ಇಲ್ಲದಿರುವುದು,<br>3. ಹಿಂದಿನ ನಿಕಟಪೂರ್ವ ಜನಗಣತಿಯಲ್ಲಿ ಅಂತಹ ಪ್ರದೇಶದಿಂದ ಸ್ಥಳೀಯ ಆಡಳಿತಕ್ಕಾಗಿ ತೆರಿಗೆ ಮತ್ತು ತೆರಿಗೆಯಲ್ಲದ ಇತರ ಸಂಪನ್ಮೂಲಗಳಿಂದ ಉತ್ಪಾದಿತವಾದ ರಾಜಸ್ವ ವಾರ್ಷಿಕ ಒಂಬತ್ತು ಲಕ್ಷ ಅಥವಾ ವಾರ್ಷಿಕ ತಲಾ ಒಬ್ಬರಿಗೆ 45 ರೂಪಾಯಿಗಳ ದರದಂತೆ ಲೆಕ್ಕ ಹಾಕಲಾದ ಮೊತ್ತ ಇವೆರಡರಲ್ಲಿ ಯಾವುದು ಹೆಚ್ಚೋ ಆ ಮೊತ್ತಕ್ಕಿಂತ ಕಡಿಮೆ ಇರದ ಹೊರತು,<br>4. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗಾವಕಾಶಗಳ ಶೇಕಡಾವಾರು ಪ್ರಮಾಣವು ಒಟ್ಟು ಉದ್ಯೋಗದ ಪ್ರಮಾಣಕ್ಕಿಂತ ಶೇ.50 ಕ್ಕಿಂತ ಕಡಿಮೆ ಇಲ್ಲದಿರುವುದು.<br>ನಗರಸಭೆಯನ್ನಾಗಿ ಮೇಲ್ದರ್ಜೆಗೇರಿಸಲು ಕರ್ನಾಟಕ ಪೌರಸಭೆಗಳ ಅಧಿನಿಯಮ 1964 ರ ನಿಯಮ 3(1), 3(2) ರನ್ವಯ ಈ ಕೆಳಕಂಡ ಮಾನದಂಡಗಳನ್ನು ಅನುಸರಿಸಲಾಗುತ್ತದೆ.<br>1. ಆ ಪ್ರದೇಶದ ಜನಸಂಖ್ಯೆ 50,000 ಕ್ಕೆ ಕಡಿಮೆ ಇಲ್ಲದಂತೆ ಹಾಗೂ 3 ಲಕ್ಷಕ್ಕೆ ಹೆಚ್ಚಿಲ್ಲದಂತಿರಬೇಕು. |

| | | |
|---|---|---|
| | | 2. ಅಂತಹ ಪ್ರದೇಶದ ಜನಸಂಖ್ಯೆಯ ಜನಸಾಂದ್ರತೆಯು ಆ ಪ್ರದೇಶದ ಒಂದು ಚದರ ಕಿ.ಮೀ. ವಿಸ್ತೀರ್ಣಕ್ಕೆ 1500 ಕ್ಕಿಂತ ಕಡಿಮೆ ಇಲ್ಲದಿರುವುದು,<br>3. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗಾವಕಾಶಗಳ ಶೇಕಡಾವಾರು ಪ್ರಮಾಣವು ಒಟ್ಟು ಉದ್ಯೋಗದ ಪ್ರಮಾಣಕ್ಕಿಂತ ಶೇ.50 ಕ್ಕಿಂತ ಕಡಿಮೆ ಇಲ್ಲದಿರುವುದು.<br>4. ಹಿಂದಿನ ನಿಕಟಪೂರ್ವ ಜನಗಣತಿಯಲ್ಲಿ ಅಂತಹ ಪ್ರದೇಶದಿಂದ ಸ್ಥಳೀಯ ಆಡಳಿತಕ್ಕಾಗಿ ತೆರಿಗೆ ಮತ್ತು ತೆರಿಗೆಯಲ್ಲದ ಇತರ ಸಂಪನ್ಮೂಲಗಳಿಂದ ಉತ್ಪಾದಿತವಾದ ರಾಜಸ್ವ ವಾರ್ಷಿಕ ಒಂಬತ್ತು ಲಕ್ಷ ಅಥವಾ ವಾರ್ಷಿಕ ತಲಾ ಒಬ್ಬರಿಗೆ 45 ರೂಪಾಯಿಗಳ ದರದಂತೆ ಲೆಕ್ಕ ಹಾಕಲಾದ ಮೊತ್ತ ಇವೆರಡರಲ್ಲಿ ಯಾವುದು ಹೆಚ್ಚೋ ಆ ಮೊತ್ತಕ್ಕಿಂತ ಕಡಿಮೆ ಇರದ ಹೊರತು. |
| ಉ) | ಹಾಗಿದ್ದಲ್ಲಿ, ಸದರಿ ಪಟ್ಟಣ ಪಂಚಾಯಿತಿಗಳಿಗೆ ನೀಡಲಾದ ಮೂಲಭೂತ ಸೌಕರ್ಯಗಳೇನು; | ಮೇಲ್ದರ್ಜೆಗೇರಿಸಿದ ಪಟ್ಟಣ ಪಂಚಾಯಿತಿಗಳಿಗೆ ಸ್ಥಳೀಯ ಖಜಾನೆಯಲ್ಲಿ ವ್ಯವಹರಿಸಲು ಸಾಮಾನ್ಯ ನಿಧಿ ಖಾತೆ, ವೇತನ ನಿಧಿ ಖಾತೆ, ಮತ್ತು ಸೇವಾ ಶುಲ್ಕ ನಿಧಿ ಖಾತೆಗಳನ್ನು ಖಜಾನೆ-2 ರಡಿಯಲ್ಲಿ ಖಾತೆಗಳನ್ನು ತೆರೆಯಲಾಗಿದೆ. 2022-23 ನೇ ಸಾಲಿನ ರಾಜ್ಯದ ನಗರ ಸ್ಥಳೀಯ ಸಂಸ್ಥೆಗಳ ಆಯ-ವ್ಯಯದಲ್ಲಿ ಅನುದಾನವನ್ನು ಕಾಯ್ದಿರಿಸಿ ಅಭಿವೃದ್ಧಿ ಕಾಮಗಾರಿ ಕೈಗೊಳ್ಳಲು ಅನುದಾನವನ್ನು ಬಿಡುಗಡೆ ಮಾಡಲಾಗುವುದು.<br><br>**ಸ್ವಚ್ಛ ಭಾರತ್ ಮಿಷನ್:** ಕೇಂದ್ರ ಪುರಸ್ಕೃತ ಸ್ವಚ್ಚ ಭಾರತ ಯೋಜನೆಯಡಿ ಪಟ್ಟಣ ಪಂಚಾಯಿತಿಗಳಿಗೆ ವೈಯಕ್ತಿಕ ಶೌಚಾಲಯಗಳ ನಿರ್ಮಾಣ, ಸಮುದಾಯ/ಸಾರ್ವಜನಿಕ ಶೌಚಾಲಯಗಳ ನಿರ್ಮಾಣ ಮತ್ತು ಘನತ್ಯಾಜ್ಯ ವಸ್ತು ನಿರ್ವಹಣೆಯ ಕಾಮಗಾರಿಗಳನ್ನು ಅಭಿವೃದ್ಧಿ ಪಡಿಸಲಾಗುತ್ತದೆ. ಮುಂದುವರೆದು ಸ್ವಚ್ಚ ಭಾರತ ಯೋಜನೆಯಡಿ ಹೊಸದಾಗಿ ಮೇಲ್ದರ್ಜೆಗೇರಿರುವ ನಗರ ಸ್ಥಳೀಯ ಸಂಸ್ಥೆಗಳಿಗೆ ರೂ 20.60 ಕೋಟಿಗಳ ಮೊತ್ತವನ್ನು ಬಿಡುಗಡೆ ಮಾಡಲಾಗಿರುತ್ತದೆ.<br><br>**ನಗರೋತ್ಥಾನ (ಮುನಿಸಿಪಾಲಿಟಿ)-3ನೇ ಹಂತದ ಯೋಜನೆಯಡಿ** 2016-17ನೇ ಸಾಲಿನಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸುವ ಕಾಮಗಾರಿಗಳಾದ ಕುಡಿಯುವ ನೀರು ಮತ್ತು ಒಳಚರಂಡಿ ಕಾಮಗಾರಿಗಳ ವಂತಿಕೆ, ಕೇಂದ್ರ ಸರ್ಕಾರದ ಯೋಜನೆಗಳಿಗೆ ನಗರ ಸ್ಥಳೀಯ ಸಂಸ್ಥೆಗಳ ವಂತಿಕೆ, ರಸ್ತೆ ಅಭಿವೃದ್ಧಿ ಕಾಮಗಾರಿ, ಮಳೆ ನೀರು ಚರಂಡಿ ಅಭಿವೃದ್ಧಿ ಕಾಮಗಾರಿ, ಕಛೇರಿ ಕಟ್ಟಡ ನಿರ್ಮಾಣ, ಸಮುದಾಯ ಮತ್ತು ಸಾರ್ವಜನಿಕ ಶೌಚಾಲಯ ನಿರ್ಮಾಣ, ಆಧುನಿಕ ಬಸ್ ನಿಲ್ದಾಣ ನಿರ್ಮಾಣ, ಮಾರುಕಟ್ಟೆ ಸಂಕೀರ್ಣ ನಿರ್ಮಾಣ ಕಾಮಗಾರಿಗಳನ್ನು ಕೈಗೊಳ್ಳಲು ಪ್ರಸ್ತಾಪಿಸಿ ಹಾಲಿ ಇದ್ದ 50 ಪಟ್ಟಣ ಪಂಚಾಯಿತಿಗಳಿಗೆ ತಲಾ ರೂ. 2.00 ಕೋಟಿಗಳಂತೆ ಒಟ್ಟಾರೆ ಮೊತ್ತ ರೂ. 100.00 ಕೋಟಿಗಳು ಹಾಗೂ ಹೊಸದಾಗಿ ಸೃಜಿಸಲಾದ 40 ಪಟ್ಟಣ ಪಂಚಾಯತಿಗಳಿಗೆ ತಲಾ ರೂ. 5.00 |

ಕೋಟಿಗಳಂತೆ ಒಟ್ಟಾರೆ ಮೊತ್ತ ರೂ. 200.00 ಕೋಟಿಗಳು ಮಂಜೂರು ಮಾಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

**ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4) ಯಡಿ** 2021-22ನೇ ಸಾಲಿನ ಮಾರ್ಗಸೂಚಿಯಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸುವ ಕಾಮಗಾರಿಗಳಾದ ಕುಡಿಯುವ ನೀರು ಮತ್ತು ಒಳಚರಂಡಿ ಕಾಮಗಾರಿಗಳ ವಂತಿಕೆ, ಕೇಂದ್ರ ಸರ್ಕಾರದ ಯೋಜನೆಗಳಿಗೆ ನಗರ ಸ್ಥಳೀಯ ಸಂಸ್ಥೆಗಳ ವಂತಿಕೆ ರಸ್ತೆ ಅಭಿವೃದ್ಧಿ ಕಾಮಗಾರಿ, ಮಳೆ ನೀರು ಚರಂಡಿ ಅಭಿವೃದ್ಧಿ ಕಾಮಗಾರಿ, ಕಛೇರಿ ಕಟ್ಟಡ ನಿರ್ಮಾಣ, ಸಮುದಾಯ ಮತ್ತು ಸಾರ್ವಜನಿಕ ಶೌಚಾಲಯ ನಿರ್ಮಾಣ, ಆಧುನಿಕ ಬಸ್ ನಿಲ್ದಾಣ ನಿರ್ಮಾಣ, ಮಾರುಕಟ್ಟೆ ಸಂಕೀರ್ಣ ನಿರ್ಮಾಣ ಕಾಮಗಾರಿಗಳನ್ನು ಕೈಗೊಳ್ಳಲು ಪ್ರಸ್ತಾಪಿಸಲಾಗಿರುತ್ತದೆ. 117 ಪಟ್ಟಣ ಪಂಚಾಯಿತಿಗಳಿಗೆ ತಲಾ 5.00 ಕೋಟಿಗಳಂತೆ ಒಟ್ಟಾರೆ ರೂ. 585.00 ಕೋಟಿಗಳು ಹಂಚಿಕೆಯಾಗಿರುತ್ತದೆ. ಪ್ರಸ್ತುತ ಜಿಲ್ಲಾ ಮಟ್ಟದಲ್ಲಿ ಯೋಜನೆಯ ಮಾರ್ಗಸೂಚಿಯಂತೆ ಕ್ರಿಯಾಯೋಜನೆ ತಯಾರಿಕೆ ಹಂತದಲ್ಲಿರುತ್ತದೆ.

**15ನೇ ಹಣಕಾಸು ಆಯೋಗ:** ಮೇಲ್ದರ್ಜೆಗೇರಿಸಲಾದ ಪಟ್ಟಣ ಪಂಚಾಯಿತಿಗಳಿಗೆ ನಿಯಮಾನುಸಾರ 2015-16ನೇ ಸಾಲಿನಿಂದ 2019-20ನೇ ಸಾಲಿನ ವರೆಗೆ 14ನೇ ಹಣಕಾಸು ಆಯೋಗದ ಅನುದಾನವನ್ನು ಮೂಲಭೂತ ಸೌಕರ್ಯಗಳನ್ನು ಕೈಗೊಳ್ಳಲು 3ನೇ ಎಸ್.ಎಫ್.ಸಿ. ಶಿಫಾರಸ್ಸಿನಂತೆ ಹಂಚಿಕೆ ಮಾಡಿ ಬಿಡುಗಡೆಗೊಳಿಸಲಾಗಿದೆ.

2020-21 ಮತ್ತು 2021-22ನೇ ಸಾಲಿನಲ್ಲಿ 15ನೇ ಹಣಕಾಸು ಆಯೋಗದ ಅನುದಾನವನ್ನು ಮೇಲ್ದರ್ಜೆಗೇರಿಸಿರುವ ಪಟ್ಟಣ ಪಂಚಾಯಿತಿಗಳು ಒಳಗೊಂಡಂತೆ, 3ನೇ ಎಸ್.ಎಫ್.ಸಿ. ಶಿಫಾರಸ್ಸಿನನ್ವಯ ಅನುದಾನವನ್ನು ಮೂಲಭೂತ ಸೌಕರ್ಯಗಳನ್ನು ಕೈಗೊಳ್ಳಲು ಹಂಚಿಕೆ ಮಾಡಿ ಬಿಡುಗಡೆಗೊಳಿಸಲಾಗಿದೆ.

2021-22ನೇ ಸಾಲಿನ 15ನೇ ಹಣಕಾಸು ಆಯೋಗದ ಅನುದಾನವನ್ನು ಆಯವ್ಯಯ ಸಮಯದಲ್ಲಿ ಅಸ್ತಿತ್ವದಲ್ಲಿದ್ದ ಈ ಕೆಳಕಂಡ ಮೇಲ್ದರ್ಜೆಗೇರಿಸಲಾದ ಪಟ್ಟಣ ಪಂಚಾಯಿತಿಗಳಿಗೆ ಮೂಲಭೂತ ಸೌಕರ್ಯಗಳನ್ನು ಕೈಗೊಳ್ಳಲು ಈ ಕೆಳಕಂಡಂತೆ ಅನುದಾನ ಹಂಚಿಕೆ ಮಾಡಲಾಗಿದೆ.

(ರೂ. ಲಕ್ಷಗಳಲ್ಲಿ)

| ಜಿಲ್ಲೆ | ಮೇಲ್ದರ್ಜೆಗೇರಿಸಲಾದ ಪಟ್ಟಣ ಪಂಚಾಯಿತಿ | 2021-22ನೇ ಸಾಲಿನಲ್ಲಿ ಹಂಚಿಕೆಯಾದ ಅನುದಾನ |
|---|---|---|
| ಬಾಗಲಕೋಟೆ | ಲೋಕಾಪುರ | 137.00 |
| | ಶಿರೂರು | 134.00 |
| ಚಿಕ್ಕಮಗಳೂರು | ಅಜ್ಜಂಪುರ | 116.00 |

| ದಕ್ಷಿಣ ಕನ್ನಡ | ಕಡಬ | 85.00 |
|---|---|---|
| ದಾವಣಗೆರೆ | ನ್ಯಾಮತಿ | 56.00 |
| ಹಾವೇರಿ | ರಟ್ಟಿಹಳ್ಳಿ | 90.00 |
| ಕಲಬುರಗಿ | ಯಡ್ರಾಮಿ<br>ಕಾಳಗಿ | 85.00 |
| | ಕಮಲಾಪುರ | 105.00 |
| ಉಡುಪಿ | ಬೈಂದೂರು | 210.00 |
| ವಿಜಯಪುರ | ತಿಕೋಟ | 62.00 |
| ಯಾದಗಿರಿ | ಹುಣಸಗಿ | 173.00 |

2021–22ನೇ ಸಾಲಿನ ಆಯವ್ಯಯದ ನಂತರ ಮೇಲ್ದರ್ಜೆಗೇರಿಸಲಾದ ಪಟ್ಟಣ ಪಂಚಾಯಿತಿಗಳಿಗೆ 15ನೇ ಹಣಕಾಸು ಆಯೋಗದ ಅನುದಾನವನ್ನು ಹಂಚಿಕೆ ಮಾಡಿಲ್ಲ. ಸದರಿ ಪಟ್ಟಣ ಪಂಚಾಯಿತಿಗಳಿಗೆ 2022–23 ನೇ ಸಾಲಿನ ಆಯ–ವ್ಯಯದಲ್ಲಿ ಅನುದಾನವನ್ನು ಕಾಯ್ದಿರಿಸಿ ಅಭಿವೃದ್ಧಿ ಕಾಮಗಾರಿ ಕೈಗೊಳ್ಳಲು ಅನುದಾನವನ್ನು ಬಿಡುಗಡೆ ಮಾಡಲು ಕ್ರಮ ವಹಿಸಲಾಗುವುದು.

ಹಂಚಿಕೆಯಾದ ಅನುದಾನವನ್ನು 2 ಭಾಗಗಳಾಗಿ ವಿಂಗಡಿಸಿದ್ದು, ಶೇಕಡ 60 ರಷ್ಟು ಅನುದಾನವು ನಿರ್ಬಂಧಿತ ಅನುದಾನವಾಗಿದ್ದು, ನಿರ್ಬಂಧಿತ ಅನುದಾನವನ್ನು ಸಮಾನವಾಗಿ ಕುಡಿಯುವ ನೀರು ಸರಬರಾಜು ಮತ್ತು ಘನತ್ಯಾಜ್ಯ ವಸ್ತು ನಿರ್ವಹಣೆಗಾಗಿ ಬಳಸಲು ಕಡ್ಡಾಯಗೊಳಿಸಿದೆ. ಉಳಿದ ಶೇಕಡ 40ರಷ್ಟು ಅನುದಾನ ಮುಕ್ತ (ಮೂಲ) ಅನುದಾನವಾಗಿದ್ದು, ಸದರಿ ಅನುದಾನವನ್ನು ನಗರ ಸ್ಥಳೀಯ ಸಂಸ್ಥೆಗಳ ಅವಶ್ಯಕತೆಗನುಗುಣವಾಗಿ ಹನ್ನೆರಡನೇ ಶೆಡ್ಯೂಲ್‌ನಲ್ಲಿ ತಿಳಿಸಿರುವ ಕಾರ್ಯಗಳಿಗೆ ಬಳಸಲು ಮಾರ್ಗಸೂಚಿಯನ್ನು ಹೊರಡಿಸಲಾಗಿದೆ.

| | | |
|---|---|---|
| ಊ) | ಮೇಲ್ದರ್ಜೆಗೇರಿಸಿದ ಪಟ್ಟಣ ಪಂಚಾಯಿತಿಗಳ ಸ್ವಂತ ಕಟ್ಟಡ ಇಲ್ಲದಿರುವ ಪ್ರಕರಣಗಳ ಸಂಖ್ಯೆ ಎಷ್ಟು? (ವಿವರ ನೀಡುವುದು) | ಸ್ವಂತ ಕಟ್ಟಡ ಇಲ್ಲದಿರುವ ಪ್ರಕರಣಗಳ ಸಂಖ್ಯೆ 22. ವಿವರವನ್ನು <u>ಅನುಬಂಧ</u>ದಲ್ಲಿ ಲಗತ್ತಿಸಿದೆ. |

ಸಂಖ್ಯೆ: ನಅಇ 39 ಜಿಇಎಲ್ 2022

(ಎನ್. ನಾಗರಾಜು ಎಂ.ಟಿ.ಬಿ)
ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು.

No. of Town Panchayats which have no Office Buildings in Upgraded ULB's (From 2015 onwards)

| SL. No. | Name of the district | SL. No. | Name of uprgraded ULB |
|---|---|---|---|
| 1 | Tumkur | 1 | TP Huliyar |
| 2 | Udupi | 2 | TP Byndoor |
| 3 | Belagavi | 3 | TP Shedabal |
| | | 4 | TP M.K.Hubli |
| 4 | Vijapur | 5 | TP Almel |
| | | 6 | TP Chadachana |
| | | 7 | TP Kolhar |
| | | 8 | TP Managuli |
| | | 9 | TP Nidagundi |
| | | 10 | TP Tikota |
| 5 | Bagalkot | 11 | TP Aminagad |
| | | 12 | TP Belagali |
| | | 13 | TP Kamatagi |
| 6 | Haveri | 14 | TP Guttal |
| | | 15 | TP Rattiahlli |
| 7 | Gulbarga | 16 | TP Kalagi |
| 8 | Koppal | 17 | TP Kanakagiri |
| | | 18 | TP Tavaragera |
| | | 19 | TP Kukanoor |
| | | 20 | TP Bhagyanagar |
| 9 | Bellary | 21 | TP Kudathini |
| | | 22 | TP Mariyammana Halli |

CHIEF PROJECT OFFICER
Urban Poverty Alleviation Management Unit
Directorate of Municipal Administration
Bangalore

# ಕರ್ನಾಟಕ ವಿಧಾನ ಸಭೆ

| | |
|---|---|
| ಸದಸ್ಯರಹೆಸರು | ಶ್ರೀ ಪುಟ್ಟರಂಗಶೆಟ್ಟಿ ಸಿ. (ಚಾಮರಾಜನಗರ) |
| ಚುಕ್ಕೆಗುರುತಿಲ್ಲದಪ್ರಶ್ನೆಸಂಖ್ಯೆ | 641 |
| ಉತ್ತರಿಸಬೇಕಾದದಿನಾಂಕ | 18.02.2022 |
| ಉತ್ತರಿಸಬೇಕಾದಸಚಿವರು | ನಗರಾಭಿವೃದ್ಧಿಸಚಿವರು |

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಕಳೆದ ಮೂರು ವರ್ಷಗಳಿಂದ ಚಾಮರಾಜನಗರ ಜಿಲ್ಲೆಯಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಕರ್ನಾಟಕ ನಗರ ಮೂಲ ಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ನಿಗಮ ನಿಯಮದಡಿ ಮಂಜೂರಾದ ಯೋಜನೆಗಳಾವುವು; (ಕಾಮಗಾರಿವಾರು, ವರ್ಷವಾರು ವಿವರ ನೀಡುವುದು)</td><td>ಚಾಮರಾಜನಗರ ಜಿಲ್ಲೆಗೆ ಕಳೆದ ಮೂರು ವರ್ಷಗಳಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ ಯಾವುದೇ ಯೋಜನೆಗಳು ಕೈಗೊಂಡಿರುವುದಿಲ್ಲ.<br><br>ಕರ್ನಾಟಕ ನಗರ ಮೂಲಸೌಕರ್ಯ ಮತ್ತು ಅಭಿವೃದ್ಧಿ ಹಣಕಾಸು ಸಂಸ್ಥೆ ವತಿಯಿಂದ ಕಳೆದ ಮೂರು ವರ್ಷಗಳಲ್ಲಿ ರಾಜ್ಯ ಸರ್ಕಾರದ ಅನುದಾನದ ಮುಂದುವರೆದ ಕೆಯುಐಆರ್‌ಪಿ ಯೋಜನೆಯಡಿ ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ನಗರಕ್ಕೆ 24/7 ನಿರಂತರ ನೀರು ಸರಬರಾಜು ಯೋಜನೆಗೆ ಸರ್ಕಾರದ ಆದೇಶ ದಿನಾಂಕ: 04-06-2016 ರಲ್ಲಿಅನುಮೋದನೆ ನೀಡಲಾಗಿದ್ದು, ಪ್ರಸ್ತುತ ಸಾಲಿನಲ್ಲಿ ಕಾಮಗಾರಿಯ ಅನುಷ್ಠಾನ ಪ್ರಗತಿಯಲ್ಲಿರುತ್ತದೆ.
<table>
<tr><th>ಕ್ರ.ಸಂ</th><th>ಜಿಲ್ಲಾ ಹೆಸರು</th><th>ಯೋಜನಾ ಪಟ್ಟಣ</th><th>ಕೈಗೊಂಡ ಕಾಮಗಾರಿ</th><th>ಪ್ರಸ್ತುತ/ ಷರಾ</th></tr>
<tr><td>1</td><td>ಚಾಮರಾಜನಗರ</td><td>ಕೊಳ್ಳೇಗಾಲ</td><td>ನಿರಂತರ ನೀರು ಸರಬರಾಜು ಕಾಮಗಾರಿ</td><td>ಯೋಜನೆಯ ಗುತ್ತಿಗೆ ರೂ.65.91 ಕೋಟಿ ಮೊತ್ತಕ್ಕೆ (ಸ್ಥಳೀಯ ಸಂಸ್ಥೆಯ ಮೂಲಕ 5 ವರ್ಷಗಳ ಕಾರ್ಯಾಚರಣೆ ಮತ್ತು ನಿರ್ವಹಣೆಗೆ ರೂ.10.85 ಕೋಟಿ ಒಳಗೊಂಡು) ದಿನಾಂಕ: 25.04.2019 ರಂದು ಗುತ್ತಿಗೆ ನೀಡಲಾಗಿದ್ದು, ಪ್ರಸ್ತುತ ಕಾಮಗಾರಿಯು ಪ್ರಗತಿಯಲ್ಲಿದೆ ಹಾಗೂ ದಿನಾಂಕ:31.05.2022 ರೊಳಗೆ ಪೂರ್ಣಗೊಳ್ಳುವ ನಿರೀಕ್ಷೆಯಿದೆ.</td></tr>
</table>
</td></tr>
</table>

<table>
<tr>
<td>ಆ)</td>
<td>ಹಾಗಿದ್ದಲ್ಲಿ, ಮಂಜೂರಾದ ಕಾಮಗಾರಿಗಳು ಪ್ರಸ್ತುತ ಯಾವ ಹಂತದಲ್ಲಿದೆ; (ಕಾಮಗಾರಿವಾರು ಸಂಪೂರ್ಣ ವಿವರ ನೀಡುವುದು)</td>
<td>ಕೊಳ್ಳೇಗಾಲ ನಗರದಲ್ಲಿ ಪ್ರಸ್ತುತ ಕಾಮಗಾರಿಯ ಪ್ರಗತಿ ವಿವರ ಈ ಕೆಳಕಂಡಂತಿದೆ.
<table>
<tr><th colspan="2">ಭೌತಿಕ</th><th colspan="2">ಆರ್ಥಿಕ (ರೂ.ಕೋಟಿಗಳಲ್ಲಿ)</th><th rowspan="2">ಪ್ರಸ್ತುತ</th></tr>
<tr><th>ಗುರಿ</th><th>ಪ್ರಗತಿ</th><th>ಗುರಿ</th><th>ಪ್ರಗತಿ</th></tr>
<tr><td>ನೆಟ್‌ವರ್ಕ್ ಜಾಲ 205 ಕಿ.ಮೀ.</td><td>188 ಕಿ.ಮೀ.</td><td rowspan="5">55.06 (ಸ್ಥಳೀಯ ಸಂಸ್ಥೆಯ ಮೂಲಕ 5 ವರ್ಷಗಳ ಕಾರ್ಯಾಚರಣೆ ಮತ್ತು ನಿರ್ವಹಣೆ ರೂ.10.85 ಕೋಟಿ ಹೊರತುಪಡಿಸಿ)</td><td rowspan="5">35.01</td><td rowspan="5">ಸದರಿ ಕಾಮಗಾರಿಯು ಪೂರ್ಣಗೊಂಡ ನಂತರ 5 ವರ್ಷಗಳ ಕಾರ್ಯಾಚರಣೆ ಮತ್ತು ನಿರ್ವಹಣೆಯನ್ನು ನಗರಸಭೆ ವತಿಯಿಂದ ನೀರಿನ ಕರ ಸಂಗ್ರಹಣೆ ಮೂಲಕ ಕೈಗೊಳ್ಳುವ ಗುರಿ ಹೊಂದಿದೆ.</td></tr>
<tr><td>ಗೃಹ ಸಂಪರ್ಕಗಳು 16000</td><td>11600</td></tr>
<tr><td>ಒಹೆಚ್‌ಟಿ 6 7.50 ಕಿ.ಲೀ.</td><td rowspan="3">ಪ್ರಗತಿಯಲ್ಲಿರುತ್ತದೆ</td></tr>
<tr><td>ಪಂಪ್‌ಹೌಸ್ 1</td></tr>
<tr><td>ಪಂಪ್‌ಗಳ ಬದಲಿ ಜೋಡಣೆ/ ರಿಪೇರ್ 4</td></tr>
</table>
</td>
</tr>
<tr>
<td>ಇ)</td>
<td>ಚಾಮರಾಜನಗರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ನೀರು ಸರಬರಾಜು ಮತ್ತು ಒಳಚರಂಡಿ ಮೂಲ ಸೌಕರ್ಯ ಒದಗಿಸುವ ಹೊಸ ಪ್ರಸ್ತಾವನೆಗಳು ಸರ್ಕಾರದ ಮುಂದಿದೆಯೇ? (ವಿವರ ನೀಡುವುದು)</td>
<td>ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ ಚಾಮರಾಜನಗರ ಮತ್ತು 6 ಮಾರ್ಗ ಮಧ್ಯದ ಗ್ರಾಮಗಳಿಗೆ 3ನೇ ಹಂತದ ನೀರು ಸರಬರಾಜು ಯೋಜನೆಯ ರೂ.276.00 ಕೋಟಿಗಳ ಅಂದಾಜು ಪಟ್ಟಿಯನ್ನು ಸಿದ್ಧಪಡಿಸಿ ಸರ್ಕಾರದ ಆಡಳಿತಾತ್ಮಕ ಅನುಮೋದನೆಗೆ ಸಲ್ಲಿಸಲಾಗಿತ್ತು.<br><br>ಅನುದಾನದ ಕೊರತೆಯಿಂದಾಗಿ ಏಪ್ರಿಲ್ 2023 ರವರೆಗೆ ಹೊಸ ಕಾಮಗಾರಿಗಳನ್ನು ಕೈಗೊಳ್ಳದಂತೆ ಆರ್ಥಿಕ ಇಲಾಖೆಯು ಸೂಚಿಸಿರುವ ಹಿನ್ನಲೆಯಲ್ಲಿ ಸದ್ಯಕ್ಕೆ ಈ ಕಾಮಗಾರಿಯ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಸಾಧ್ಯವಾಗಿರುವುದಿಲ್ಲ.</td>
</tr>
</table>

ಸಂಖ್ಯೆ : ನಅಇ 25 ಯುಎಂಎಸ್ 2022

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು



# ಕರ್ನಾಟಕ ವಿಧಾನ ಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 642 |
|---|---|
| ಸದಸ್ಯರ ಹೆಸರು | ಶ್ರೀ ರಾಮಪ್ಪ ಎಸ್. |
| ಉತ್ತರಿಸಬೇಕಾದ ದಿನಾಂಕ | 18.02.2022 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ, ಹಿರಿಯ ನಾಗರಿಕರ ಸಬಲೀಕರಣ ಸಚಿವರು. |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ) | ಹರಿಹರ ಕ್ಷೇತ್ರದ ವ್ಯಾಪ್ತಿಯಲ್ಲಿ ಸರ್ಕಾರದ ವಿವಿಧ ಅಭಿವೃದ್ಧಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಹಾಗೂ ಸಾರ್ವಜನಿಕರು ತಮ್ಮ ಸ್ವಂತ ಮನೆಗಳನ್ನು ನಿರ್ಮಿಸಿಕೊಳ್ಳಲು ಮರಳಿನ ಅಭಾವವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಬಂದಿದ್ದಲ್ಲಿ, ಮರಳಿನ ಅಭಾವವನ್ನು ನೀಗಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ವಿವರ ನೀಡುವುದು) | ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕು ವ್ಯಾಪ್ತಿಯಲ್ಲಿ ಬೇಡಿಕೆಗೆ ತಕ್ಕಂತೆ ಮರಳನ್ನು ಪೂರೈಸಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ.<br>• ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕು ತುಂಗಭದ್ರಾ ನದಿಪಾತ್ರದಲ್ಲಿ 5 ಮರಳು ಬ್ಲಾಕ್ ಗಳನ್ನು ಟೆಂಡರ್ ಕಂ-ಹರಾಜಿನ ಮೂಲಕ ಯಶಸ್ವಿ ಬಿಡ್ಡುದಾರರಿಗೆ 05 ವರ್ಷಗಳ ಅವಧಿಗೆ ಮರಳು ಗುತ್ತಿಗೆಗಳನ್ನು ಮಂಜೂರು ಮಾಡಲಾಗಿರುತ್ತದೆ.<br>• ಸದರಿ ಮರಳು ಗುತ್ತಿಗೆ ಪ್ರದೇಶಗಳಿಂದ 2019-20ನೇ ಸಾಲಿನಿಂದ 2021-22ನೇ ಸಾಲಿನ ಜನವರಿ ಅಂತ್ಯದವರೆಗೆ ತಾಲ್ಲೂಕು / ಜಿಲ್ಲೆಯ ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಪೂರೈಕೆಯಾದ ಮರಳಿನ ಪ್ರಮಾಣದ ವಿವರಗಳು ಈ ಕೆಳಕಂಡಂತೆ ಇರುತ್ತದೆ. |

....2

| ಕ್ರ. ಸಂ. | ವರ್ಷ | ಪೂರೈಕೆಯಾದ ಮರಳಿನ ಪ್ರಮಾಣ (ಮೆಟ್ರಿಕ್ ಟನ್) |
|---|---|---|
| 1 | 2019-20 | 60,844 |
| 2 | 2020-21 | 38,288 |
| 3 | 2021-22 (ಜನವರಿ ಅಂತ್ಯಕ್ಕೆ) | 17,003 |

- ಅಲ್ಲದೆ, ದಾವಣಗೆರೆ ಜಿಲ್ಲೆ, ಹೊನ್ನಾಳಿ ತಾಲ್ಲೂಕು ವ್ಯಾಪ್ತಿಯ ತುಂಗಾಭದ್ರಾ ನದಿ ಪಾತ್ರದಲ್ಲಿ ಟೆಂಡರ್-ಕಂ-ಹರಾಜು ಮೂಲಕ ಯಶಸ್ವಿ ಬಿಡ್ಡುದಾರರಿಗೆ 12 ಮರಳು ಬ್ಲಾಕ್ ಗಳಿಗೆ ಮರಳು ಗುತ್ತಿಗೆಗಳನ್ನು ಮಂಜೂರು ಮಾಡಲಾಗಿದ್ದು, ಸದರಿ ಮರಳು ಗುತ್ತಿಗೆ ಪ್ರದೇಶಗಳಿಂದಲೂ ಸಹ ಜಿಲ್ಲೆಯ ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗೆಗಳಿಗೆ ಮರಳು ಪೂರೈಕೆಯಾಗಿರುತ್ತದೆ.
- ದಾವಣಗೆರೆ ಜಿಲ್ಲಾ ವ್ಯಾಪ್ತಿಯ 24 ಕ್ರಷರ್ ಘಟಕಗಳಲ್ಲಿ ಎಂ-ಸ್ಯಾಂಡ್ ಉತ್ಪಾದನೆ ಮಾಡುತ್ತಿದ್ದು, ಸದರಿ ಎಂ-ಸ್ಯಾಂಡ್ ಘಟಕಗಳಿಂದಲೂ ಸಹ ಹರಿಹರ ತಾಲ್ಲೂಕು ಹಾಗೂ ಜಿಲ್ಲೆಯ ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗೆಗಳಿಗೆ ಎಂ-ಸ್ಯಾಂಡ್ ಪೂರೈಕೆಯಾಗುತ್ತಿರುತ್ತದೆ.

ಸಂಖ್ಯೆ ಸಿಐ -ಎಂಎಂಎನ್/40/2022

Halappa B A

(ಆಚಾರ್ ಹಾಲಪ್ಪ ಬಸಪ್ಪ)
ಗಣಿ ಮತ್ತು ಭೂವಿಜ್ಞಾನ ಹಾಗೂ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು
ವಿಕಲಚೇತನರ, ಹಿರಿಯ ನಾಗರಿಕರ
ಸಬಲೀಕರಣ ಸಚಿವರು.

# ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 643 |
| 2 | ಸದಸ್ಯರ ಹೆಸರು | : | ಶ್ರೀ. ರಾಮಪ್ಪ ಎಸ್ (ಹರಿಹರ) |
| 3 | ಉತ್ತರಿಸಬೇಕಾದ ದಿನಾಂಕ | : | 18-02-2022 |
| 4 | ಉತ್ತರಿಸುವ ಸಚಿವರು | : | ನಗರಾಭಿವೃದ್ಧಿ ಸಚಿವರು |

| ಕ್ರಮ. ಸಂಖ್ಯೆ | ಕೋರಿರುವ ಪ್ರಶ್ನೆ | ಉತ್ತರ |
|---|---|---|
| (ಅ) | 2018-19 ನೇ ಸಾಲಿನಿಂದ ಇಲ್ಲಿಯವರೆಗೆ ನಗರಸಭೆ ಹರಿಹರ ಮತ್ತು ಪುರಸಭೆ ಮಲೇಬೆನ್ನೂರು ಪಟ್ಟಣದಲ್ಲಿ ಕೆ.ಯು.ಡಬ್ಲ್ಯೂ.ಎಸ್.ಡಿ.ಬಿ ಮತ್ತು ಕೆ.ಯು.ಐ.ಡಿ.ಎಫ್.ಸಿ ವತಿಯಿಂದ ನಿರ್ವಹಿಸಿದ ಕಾಮಗಾರಿಗಳು ಯಾವುವು; ಇದಕ್ಕೆ ಬಿಡುಗಡೆಯಾದ ಅನುದಾನವೆಷ್ಟು; (ಸಂಪೂರ್ಣ ವಿವರ ನೀಡುವುದು) | • ಕೆಯುಐಡಿಎಫ್‌ಸಿ ವತಿಯಿಂದ ಏಷ್ಯನ್ ಅಭಿವೃದ್ಧಿ ಬ್ಯಾಂಕ್ ಮತ್ತು ಅಮೃತ್ ನೆರವಿನ ಕರ್ನಾಟಕ ಸಮಗ್ರ ನಗರ ನೀರು ನಿರ್ವಹಣಾ ಕಾರ್ಯಕ್ರಮದಡಿ (ಕ್ವಿಮಿಪ್ – ಜಲಸಿರಿ) ರಾಜ್ಯದ ಆಯ್ದ ಎಂಟು (8) ನಗರ ಸ್ಥಳೀಯ ಸಂಸ್ಥೆಗಳಲ್ಲಿ ಒಳಚರಂಡಿ/ಕುಡಿಯುವ ನೀರು ಸರಬರಾಜು ಕಾಮಗಾರಿಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br>• ಕ್ವಿಮಿಪ್ ಯೋಜನೆಯನ್ನು 2 ಟ್ರಾಂಚ್‌ಗಳಾಗಿ ವಿಂಗಡಿಸಲಾಗಿದ್ದು, ಟ್ರಾಂಚ್-1 (ದಾವಣಗೆರೆ) ನಾಲ್ಕು (4) ನಗರ ಸ್ಥಳೀಯ ಸಂಸ್ಥೆಗಳಾದ ದಾವಣಗೆರೆ, ಹರಿಹರ, ರಾಣೆಬೆನ್ನೂರು ಮತ್ತು ಬ್ಯಾಡಗಿ ನಗರ/ಪಟ್ಟಣಗಳನ್ನು ಒಳಗೊಂಡಿರುತ್ತದೆ.<br>• ಟ್ರಾಂಚ್-2 (ಮಂಗಳೂರು) ನಾಲ್ಕು (4) ನಗರ ಸ್ಥಳೀಯ ಸಂಸ್ಥೆಗಳಾದ ಮಂಗಳೂರು, ಪುತ್ತೂರು, ಉಡುಪಿ ಮತ್ತು ಕುಂದಾಪುರ ನಗರ/ಪಟ್ಟಣಗಳನ್ನು ಒಳಗೊಂಡಿರುತ್ತದೆ.<br><br>2018-19 ನೇ ಸಾಲಿನಿಂದ ಇಲ್ಲಿಯವರೆಗೆ ಪುರಸಭೆ ಮಲೇಬೆನ್ನೂರು ಪಟ್ಟಣದಲ್ಲಿ ಕೆ.ಯು.ಡಬ್ಲ್ಯೂ.ಎಸ್.ಡಿ.ಬಿ ಮತ್ತು ಕೆ.ಯು.ಐ.ಡಿ.ಎಫ್.ಸಿ ವತಿಯಿಂದ ಯಾವುದೇ ಕಾಮಗಾರಿಗಳನ್ನು ಕೈಗೊಂಡಿರುವುದಿಲ್ಲ.<br><br>ಕ್ವಿಮಿಪ್ ಯೋಜನೆಯಲ್ಲಿ ಹರಿಹರ ನಗರದಲ್ಲಿ ಅನುಷ್ಠಾನಗೊಳಿಸಿರುವ ಕಾಮಗಾರಿಗಳ ವಿವರಗಳನ್ನು **ಅನುಬಂಧ-1** ರಲ್ಲಿ ಲಗತ್ತಿಸಿದೆ. |
| (ಆ) | ಸದರಿ ಕಾಮಗಾರಿಗಳು ಪೂರ್ಣಗೊಂಡಿವೆಯೇ; ಕಾಮಗಾರಿಗಳು ಪ್ರಸ್ತುತ ಯಾವ ಹಂತದಲ್ಲಿದೆ? (ವಿವರ ನೀಡುವುದು) | ಹರಿಹರ ನಗರದಲ್ಲಿ ಕ್ವಿಮಿಪ್ ಯೋಜನೆಯಡಿಯಲ್ಲಿ ಮೂರು (03) ಕಾಮಗಾರಿಗಳನ್ನು ಅನುಷ್ಠಾನಗೊಳಿಸಿದ್ದು ಮೂರು ಕಾಮಗಾರಿಗಳು ಪೂರ್ಣಗೊಂಡಿರುತ್ತವೆ.<br><br>ವಿವರಗಳನ್ನು **ಅನುಬಂಧ-1** ರಲ್ಲಿ ಲಗತ್ತಿಸಿದೆ. |

ಕಡತ ಸಂಖ್ಯೆ: ನಅಇ 33 ಪಿ.ಆರ್.ಜೆ 2022

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು

# ಅನುಬಂಧ-1

ರೂ. ಕೋಟಿಗಳಲ್ಲಿ

| ಕ್ರ ಸಂ | ನಗರ/ಪಟ್ಟಣ | ಕಾಮಗಾರಿಯ ಹೆಸರು | ಗುತ್ತಿಗೆದಾರರ ಹೆಸರು | ಗುತ್ತಿಗೆಯ ಮೊತ್ತ | ಪ್ರಾರಂಭ ದಿನಾಂಕ | ಮುಕ್ತಾಯ ದಿನಾಂಕ | ಭೌತಿಕ ಪ್ರಗತಿ | ಆರ್ಥಿಕ ಪ್ರಗತಿ (ಬಿಡುಗಡೆಯಾದ ಅನುದಾನ) |
|---|---|---|---|---|---|---|---|---|
| 1 | ಹರಿಹರ | ಒಳಚರಂಡಿ ಕಾಮಗಾರಿ ಮತ್ತು (18 MLD) ತ್ಯಾಜ್ಯ ನೀರು ಸಂಸ್ಕರಣಾ ಘಟಕ | ಮೆ/ಶ್ರೀರಾಮ್ ಇಪಿಸಿ ಪ್ರೈ.ಲಿ | 66.73 | 09.01.2015 | 31.08.2020 | ಕಾಮಗಾರಿ ಪೂರ್ಣಗೊಂಡಿದೆ | 64.74 |
| 2 | | ಸಗಟು ನೀರು ಕಾಮಗಾರಿ | ಮೆ/ಸೇತ್ &ಸೂರ್ ಪ್ರೈ.ಲಿ | 27.03 | 18.05.2017 | 31.08.2020 | ಕಾಮಗಾರಿ ಪೂರ್ಣಗೊಂಡಿದೆ | 26.75 |
| 3 | | 24/7 ನೀರು ಸರಬರಾಜು ಕಾಮಗಾರಿ | ಮೆ/ಪಿವೋಲಿಯ ಪ್ರೈ.ಲಿ | 50.12 | 01.09.2017 | 31.05.2021 | ಕಾಮಗಾರಿ ಪೂರ್ಣಗೊಂಡಿದ್ದು Trial run ಹಂತದಲ್ಲಿರುತ್ತದೆ | 48.26 |

ವ್ಯವಸ್ಥಾಪಕ ನಿರ್ದೇಶಕರು
ಕೆಯುಐಡಿಎಫ್‌ಸಿ
ಬೆಂಗಳೂರು.

# ಕರ್ನಾಟಕ ವಿಧಾನಸಭೆ

| | | |
|---|---|---|
| ಮಾನ್ಯ ವಿಧಾನಸಭಾ ಸದಸ್ಯರು | : | ಶ್ರೀ ನಂಜೇಗೌಡ ಕೆ, ವೈ |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 644 |
| ಉತ್ತರಿಸಬೇಕಾದ ದಿನಾಂಕ | : | 18-02-2022 |
| ಉತ್ತರಿಸಬೇಕಾದ ಸಚಿವರು | : | ಸಹಕಾರ ಸಚಿವರು |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೆಎಂಎಫ್‌ನ ಜನಪ್ರಿಯ ನಂದಿನಿ ಬ್ರಾಂಡ್‌ನ ತುಪ್ಪವನ್ನು ಮೈಸೂರು ನಗರದ ಚಾಮುಂಡಿ ಬೆಟ್ಟದ ತಪ್ಪಲಿನ ಹೊಸಹುಂಡಿ ಗ್ರಾಮ ಹೊಸಕೋಟೆ ತಾಲ್ಲೂಕು ಹಾಗೂ ಇತ್ಯಾದಿ ಕಡೆಗಳಲ್ಲಿ ನಕಲಿ ಜಾಲವೊಂದು ತುಪ್ಪಕ್ಕೆ ಡಾಲ್ಡಾ ಮಿಶ್ರಣ ಮಾಡಿ ನಕಲಿ ತುಪ್ಪ ತಯಾರು ಮಾಡಿ ಮಾರುಕಟ್ಟೆಗೆ ರವಾನಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು, ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ಹಾಗಿದ್ದಲ್ಲಿ, ಕರ್ನಾಟಕ ಸಹಕಾರ ಹಾಲು ಮಹಾಮಂಡಳಿಯು ದೇಶದ ಪ್ರತಿಷ್ಠಿತ ಸಹಕಾರಿ ಸಂಸ್ಥೆಯಾಗಿದ್ದು, ನಂದಿನಿ ಬ್ರ್ಯಾಂಡ್‌ಗೆ ಮಾರುಕಟ್ಟೆಯಲ್ಲಿ ಧಕ್ಕೆಯಾಗಿ ಪರೋಕ್ಷವಾಗಿ ಹಾಲು ಉತ್ಪಾದಕರಿಗೆ/ರೈತರಿಗೆ ತೊಂದರೆ ಯಾಗಲಿರುವುದರಿಂದ ಸರ್ಕಾರ ಕೈಗೊಂಡ ಕ್ರಮವೇನು: (ವಿವರ ನೀಡುವುದು) | ದಿನಾಂಕ:16-12-2021 ರಂದು ಮೈಸೂರು ನಗರದ ಚಾಮುಂಡಿ ಬೆಟ್ಟದ ತಪ್ಪಲಿನ ಹೊಸಹುಂಡಿ ಗ್ರಾಮದ ಗೋದಾಮಿನಲ್ಲಿ ನಂದಿನಿ ನಕಲಿ ತುಪ್ಪ ತಯಾರಿಸುವ ಬಗ್ಗೆ ವರದಿಯಾದ ಹಿನ್ನೆಲೆಯಲ್ಲಿ ಮೈಸೂರು ಹಾಲು ಒಕ್ಕೂಟದ ಅಧಿಕಾರಿಗಳು, ಸ್ಥಳೀಯ ಆಹಾರ ಪರೀಕ್ಷಣಾ ಪ್ರಾಧಿಕಾರದ ಅಧಿಕಾರಿಗಳು ಹಾಗೂ ಮೈಸೂರು ದಕ್ಷಿಣ ಪೋಲೀಸ್ ಅಧಿಕಾರಿಗಳು ತಕ್ಷಣ ಸ್ಥಳ ಪರಿಶೀಲನೆ ಮತ್ತು ಮಹಜರು ಮಾಡಿ ಗೋದಾಮನ್ನು ಸೀಲ್ ಮಾಡಿರುತ್ತಾರೆ ಹಾಗೂ ಮೈಸೂರು ದಕ್ಷಿಣ ಪೋಲಿಸ್ ಅಧಿಕಾರಿಗಳು ಅನುಮಾನಾಸ್ಪದ 7 ಜನರ ಮೇಲೆ FIR (ಪ್ರಥಮ ವರ್ತಮಾನ ವರದಿ) ದಾಖಲಿಸಿ ಅಪರಾಧಿಗಳನ್ನು ಬಂಧಿಸಿದ್ದು, ತನಿಖೆ ಪ್ರಗತಿಯಲ್ಲಿರುತ್ತದೆ.<br><br>ಹೊಸಕೋಟೆ ತಾಲ್ಲೂಕು ವ್ಯಾಪ್ತಿಯಲ್ಲಿ ನಕಲಿ ತುಪ್ಪ ದಾಸ್ತಾನಿರುವ ಬಗ್ಗೆ ತಿಳಿದು ಬಂದ ಹಿನ್ನೆಲೆಯಲ್ಲಿ ಕೆಎಂಎಫ್ ಹಿರಿಯ ಅಧಿಕಾರಿಗಳು, ಸ್ಥಳೀಯ ಪೋಲೀಸ್ ಅಧಿಕಾರಿಗಳು ಮತ್ತು FSSAI ಅಧಿಕಾರಿಗಳ ಜೊತೆ ಭೇಟಿ ನೀಡಿ 1728 ಲೀಟರ್ ಸಂಶಯಾಸ್ಪದ ತುಪ್ಪವನ್ನು ವಶಕ್ಕೆ ಪಡೆದು ಹಾಗೂ ನೆಲಮಂಗಲದ ಮಾಕಳಿ ಪ್ರದೇಶದಲ್ಲಿ ಸುಮಾರು 6990 |

| | | |
|---|---|---|
| | | ಲೀಟರ್ ತುಪ್ಪ ಮತ್ತು ಬಾಲಾಜಿ ಡಿಪಾರ್ಟ್‌ಮೆಂಟಲ್ ಸ್ಟೋರ್ಸ್, ಜಯನಗರದಲ್ಲಿ 4 ಲೀಟರ್ ಸಂಶಯಾಸ್ಪದ ತುಪ್ಪವನ್ನು ವಶಕ್ಕೆ ಪಡೆದು, ಗುಣಮಟ್ಟ ಪರೀಕ್ಷೆಗೆ ನೀಡಲಾಗಿದೆ. |
| ಇ) | ಹಾಗಿದ್ದಲ್ಲಿ, ನಂದಿನಿ ನಕಲಿ ತುಪ್ಪ ತಯಾರಿಸುತ್ತಿದ್ದ ಜಾಲದ ಮೇಲೆ FIR ದಾಖಲಿಸಲಾಗಿದೆಯೇ; ಕಾನೂನು ರೀತಿಯ ಕ್ರಮ ಕೈಗೊಳ್ಳಲಾಗಿದೆಯೇ. | ಹೌದು. ಹನ್ನೊಂದು ಜನರ ವಿರುದ್ಧ ಎಫ್.ಐ.ಆರ್. ದಾಖಲಿಸಿ, ಈ ಪೈಕಿ ಈ ಕೆಳಕಂಡ 7 ಜನರನ್ನು ಬಂಧಿಸಿ ವಿಚಾರಣೆ ಜರುಗಿಸಲಾಗುತ್ತಿದೆ.<br>1. ಮುರುಗೇಶ್–A1<br>2. ಕುಮಾರ್–A4<br>3. ಶಣ್ಮುಗ ಅಲಿಯಾಸ್ ಕುಮಾರ–A5<br>4. ಚಂದ್ರಶೇಖರ್– A6<br>5. ಪ್ರಾಣೇಶ್–A7<br>6. ರಾಜೇಶ್– A8<br>7. ಲೀಲಾರಾಮ್ ಅಲಿಯಾಸ್ ಲಲಿತ್ ಚೌಧರಿ–A9<br>ಕರ್ನಾಟಕ ಸಹಕಾರಿ ಹಾಲು ಮಹಾಮಂಡಳ (ಕಹಾಮ) ಕೆಲವು ಸಗಟು ಮಾರಾಟಗಾರರು ಸಹ ಶಾಮೀಲಾಗಿರುವುದು ಮೇಲ್ನೋಟಕ್ಕೆ ಕಂಡುಬಂದಿದ್ದು, ಈ ಕೆಳಕಂಡವರ ವಿರುದ್ಧ FIR ದಾಖಲಾಗಿದ್ದು ತನಿಖೆ ಪ್ರಗತಿಯಲ್ಲಿದೆ.<br>• ಮಾತೃಭಾಯಿ ಎಂಟರ್ ಪ್ರೈಸಸ್– ವಿವಿ ಪುರಂ<br>• ಶೃತಿ ಮಾರ್ಕೆಟಿಂಗ್ – ಜಯನಗರ<br>• ಬಾಲಾಜಿ ಡಿಪಾರ್ಟ್‌ಮೆಂಟಲ್ ಸ್ಟೋರ್ಸ್–ಮೈಕೋ ಲೇಔಟ್<br>• ಚಂದನಾ ಎಂಟರ್ ಪ್ರೈಸಸ್ – ಜಯನಗರ ಉಪ ವಿಭಾಗ |
| ಈ) | ಇಂತಹ ನಕಲಿ ಜಾಲಗಳನ್ನು ತಡೆಯಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ಒದಗಿಸುವುದು) | 1) ಪೋಲಿಸ್ ಮಹಾ ನಿರ್ದೇಶಕರು ದಿನಾಂಕ: 27.12.2021 ರಂದು ರಾಜ್ಯದ ಎಲ್ಲಾ ಪೋಲಿಸ್ ಆಯುಕ್ತರುಗಳು ಮತ್ತು ಎಲ್ಲಾ ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳಿಗೆ ಈ ಪ್ರಕರಣಕ್ಕೆ ಸಂಬಂಧಿಸಿದಂತೆ FIR ದಾಖಲಿಸಿ ಅಗತ್ಯ ಕಾನೂನು ಕ್ರಮ ಕೈಗೊಳ್ಳುವಂತೆ ಸುತ್ತೋಲೆ ಮೂಲಕ ತಿಳಿಸಿರುತ್ತಾರೆ.<br>2) ಗೋದಾಮಿನಲ್ಲಿ ಅಸಲಿ ತುಪ್ಪದ ಜೊತೆ ಡಾಲ್ಡ ಮತ್ತು ಇತರೆ ಪದಾರ್ಥಗಳನ್ನು ಬಳಸಿ ನಕಲಿ ತುಪ್ಪ |

| | | |
|---|---|---|
| | | ತಯಾರಿಸುತ್ತಿರುವ ಬಗ್ಗೆ ಮಾಹಿತಿಯನ್ನು ಮೈಸೂರು ದಕ್ಷಿಣ ಪೋಲಿಸ್ ಠಾಣೆಗೆ ಮತ್ತು ಆಹಾರ ಸುರಕ್ಷತಾ ಪ್ರಾಧಿಕಾರಕ್ಕೆ ನೀಡಿದ್ದು ಮೈಸೂರು ವಿಭಾಗದ ಅಹಾರ ಸುರಕ್ಷತಾ ಅಧಿಕಾರಿಗಳು ಸ್ಥಳಕ್ಕೆ ಆಗಮಿಸಿ, ಸ್ಥಳದಲ್ಲಿದ್ದ ನಂದಿನಿ ತುಪ್ಪ ಕಲಬೆರಕೆಗೆ ಉಪಯೋಗಿಸುತ್ತಿದ್ದ ಡಾಲ್ಡ, ಪಾಮ್ ಆಯಿಲ್ ಹಾಗೂ ಪ್ಯಾಕಿಂಗ್ ಪರಿಕರಗಳು ಮತ್ತು ಪ್ಯಾಕ್ ಮಾಡುತ್ತಿರುವ ಯಂತ್ರ, ನಕಲಿ ಸ್ಟಿಕರ್, ನಕಲಿ ಅಗ್‌ಮಾರ್ಕ್ ಲೇಬಲ್, ನಕಲಿ ಟಿನ್ ಕ್ಯಾಪ್, ಬಾಬ್ ಟೇಪ್, ಕಾರೊಗೇಟೇಡ್ ಬಾಕ್ಸ್‌ಗಳನ್ನು ಹಾಗೂ ಗೋದಾಮಿನಲ್ಲಿ ಇದ್ದ ಸುಮಾರು 3–4 ಟನ್ ಅಸಲಿ ನಂದಿನಿ ತುಪ್ಪ ಮತ್ತು 5–6 ಟನ್ ಕಲಬೆರಕೆ ತುಪ್ಪ ಇರುವುದನ್ನು ಸಹ ಖಾತರಿ ಮಾಡಿಕೊಂಡು ಮಹಜರು ಮಾಡಿರುತ್ತಾರೆ. ಅಲ್ಲದೇ ತುಪ್ಪದ ಕಲಬೆರಕೆ ಮಾದರಿಗಳನ್ನು ಪರೀಕ್ಷೆಗಾಗಿ ಸಂಗ್ರಹಿಸಿ ಸ್ಥಳ ಮಹಜರು ಮಾಡಿ ಗೋದಾಮನ್ನು ಸೀಲ್ ಮಾಡಿರುತ್ತಾರೆ<br><br>3) ಘಟನೆ ನಡೆದ ತಕ್ಷಣ ಎಲ್ಲಾ ಒಕ್ಕೂಟ ಮತ್ತು ಘಟಕಗಳ ಮುಖ್ಯಸ್ಥರೊಂದಿಗೆ ತುರ್ತು ವಿಡಿಯೋ ಸಂವಾದ ಸಭೆಯನ್ನು ಕೈಗೊಂಡು ರಾಜ್ಯಾದ್ಯಂತ ಪ್ರತಿದಿನ ಮಾರುಕಟ್ಟೆಯಲ್ಲಿ ಲಭ್ಯವಿರುವ ನಂದಿನಿ ತುಪ್ಪದ ಮಾದರಿಗಳನ್ನು ಪಡೆದು ಪರೀಕ್ಷೆ ಕೈಗೊಳ್ಳುವಂತೆ ತಿಳಿಸಲಾಗಿದೆ.<br>4) ಕೆಎಂಎಫ್ ವತಿಯಿಂದ ನಕಲಿ ತುಪ್ಪದ ಬಗ್ಗೆ ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ನಂದಿನಿ ತುಪ್ಪದ ಪ್ಯಾಕ್‌ನಲ್ಲಿ ತುಪ್ಪದ ಗುಣಮಟ್ಟದಲ್ಲಿ ಯಾವುದಾದರೂ ವ್ಯತ್ಯಾಸ ಕಂಡುಬಂದಲ್ಲಿ ತಕ್ಷಣ ಕೆ.ಎಂ.ಎಫ್.ಗೆ ದೂರವಾಣಿ / ಈ–ಮೇಲ್ ಮೂಲಕ ದೂರು/ಮಾಹಿತಿ ನೀಡುವಂತೆ ಗ್ರಾಹಕರಿಗೆ ಮನವಿ ಮಾಡಲಾಗಿದೆ.<br><br>5) ಒಕ್ಕೂಟಗಳ ಹಂತದಲ್ಲಿ ಜಾಗೃತದಳ ರಚಿಸಿ, ಆಯಾ ಮಾರುಕಟ್ಟೆ ವ್ಯಾಪ್ತಿಯಲ್ಲಿ ಪರಿಶೀಲನೆ ಮಾಡಿ ವರದಿ ಸಲ್ಲಿಸಲು ಸೂಚಿಸಲಾಗಿದೆ. ಕಾಲಕಾಲಕ್ಕೆ ಎಲ್ಲಾ ಉತ್ಪನ್ನಗಳ ಮಾರುಕಟ್ಟೆ ಮಾದರಿಗಳನ್ನು ಗುಣಮಟ್ಟ ಪರೀಕ್ಷೆಗೆ ಒಳಪಡಿಸಲಾಗುತ್ತಿದೆ.<br>6) ಮೈಸೂರು ಮಾರಾಟ ಮಳಿಗೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿ/ ಸಿಬ್ಬಂದಿಗಳಿಗೆ ಮತ್ತು 11 ಸಗಟು ಮಾರಾಟಗಾರರಿಗೆ ಕಾರಣ ಕೇಳಿ ನೋಟೀಸ್ ಜಾರಿ ಮಾಡಿ ನಿಯಮಾನುಸಾರ ಕ್ರಮವಹಿಸಲಾಗುತ್ತಿದೆ. |

7) ಒಕ್ಕೂಟ/ಘಟಕಗಳಲ್ಲಿ 15 ಕೆಜಿ ಟಿನ್ ತುಪ್ಪದ ಉತ್ಪಾದನೆ ಹಾಗೂ ಮಾರಾಟ ಪ್ರಕ್ರಿಯೆಯ ಪರಿಸ್ಥಿತಿ ನಿಯಂತ್ರಿಸಲು ತಾತ್ಕಾಲಿಕವಾಗಿ ಸ್ಥಗಿತಗೊಳಿಸಲಾಗಿದೆ. ಜೊತೆಗೆ ಡಿಪೋ ಮುಖ್ಯಸ್ಥರುಗಳು, ಸಗಟು ಮಾರಾಟಗಾರರು, ಸಾಗಾಣಿಕೆದಾರರು, WC & FA ಕಡ್ಡಾಯವಾಗಿ ಪಾಲಿಸಬೇಕಾದ / ಅನುಸರಿಸಬೇಕಾದ ಕ್ರಮಗಳ ಬಗ್ಗೆ ತಿಳಿಸಲಾಗಿದೆ.

8) ಆದ್ಯತೆ ಮೇರೆಗೆ ನಂದಿನಿ ಉತ್ಪನ್ನಗಳಿಗೆ QR code & Hologram ಅಳವಡಿಸಲು ಕ್ರಮವಿಡಲಾಗುತ್ತಿದೆ. ಉತ್ಪನ್ನಗಳ ಸಾಗಾಣಿಕೆಗಳಿಗೆ ಸೂಕ್ತ ನವೀನ ತಂತ್ರಾಂಶವನ್ನು ಅಳವಡಿಸಿಕೊಳ್ಳುವ ಕ್ರಮ ಜಾರಿಯಲ್ಲಿರುತ್ತದೆ. ಪ್ಯಾಕಿಂಗ್ ಫಿಲಂ ಹಾಗೂ ವಿನ್ಯಾಸಗಳಲ್ಲಿ ಸೂಕ್ತ ತಂತ್ರಾಂಶವನ್ನು ಅಳವಡಿಸುವ ಕ್ರಮ ಜಾರಿಯಲ್ಲಿರುತ್ತದೆ.

9) ಕಹಾಮವು ನಿಗದಿಪಡಿಸಿರುವ ಸೂಚನೆಗಳನ್ನು ಕಡ್ಡಾಯವಾಗಿ ಪಾಲಿಸುವಂತೆ ಎಲ್ಲಾ ಒಕ್ಕೂಟ/ ಘಟಕಗಳಿಗೆ ಸೂಚನೆಗಳನ್ನು ನೀಡಲಾಗಿದೆ.

10) ಒಕ್ಕೂಟಗಳಿಂದ ಡಿಪೋಗಳಿಗೆ ಸರಬರಾಜಾಗುವ ತುಪ್ಪವು ವಾಹನಗಳಿಗೆ ಲೋಡ್ ಮಾಡಿದ ಸಮಯದಿಂದ ಡಿಪೋಗಳಲ್ಲಿ ಅನ್‌ಲೋಡ್ ಮಾಡುವ ಸಮಯದವರೆಗಿನ ಚಲನ–ವಲನಗಳನ್ನು ಗಮನಿಸಲು ನಿರ್ದಿಷ್ಟವಾದ ಅಧಿಕಾರಿಗೆ ಜವಾಬ್ದಾರಿಯನ್ನು ನಿಗದಿಪಡಿಸಲಾಗಿದೆ.

11) ಬೆಂಗಳೂರು ಮಾರಾಟ ಮಳಿಗೆಗೆ ಹತ್ತಿರವಿರುವ ಒಕ್ಕೂಟಗಳಿಂದ ತುಪ್ಪದ ವಾಹನಗಳು ಸಂಜೆ ಲೋಡ್ ಆಗುತ್ತಿದ್ದು, ಡಿಪೋಗೆ ಮರುದಿನ ಬೆಳಿಗ್ಗೆ ಅನ್‌ಲೋಡ್‌ಗೆ ಬರುತ್ತಿರುತ್ತವೆ. ಇದನ್ನು ತಪ್ಪಿಸಲು ಹತ್ತಿರವಿರುವ ಒಕ್ಕೂಟಗಳು ತುಪ್ಪವನ್ನು ಸರಬರಾಜು ಮಾಡುವ ದಿನವೇ ಅಂದರೆ ಅದೇ ದಿನ ಬೆಳಿಗ್ಗೆ ಲೋಡ್ ಮಾಡಿ, ಸಂಜೆ 4.00 ಗಂಟೆಯೊಳಗೆ ಡಿಪೋಗಳಿಗೆ ತಲುಪುವಂತೆ ನೋಡಿಕೊಳ್ಳಲಾಗಿದೆ.

12) ಒಕ್ಕೂಟ/ಘಟಕಗಳ ತುಪ್ಪದ ಪ್ಯಾಕಿಂಗ್ ಫಿಲಂ, ಕಾರುಗೇಟೆಡ್ ಬಾಕ್ಸ್, ಕಲರ್‌ಕೋಡ್, ಲೇಬಲಿಂಗ್, ಕಂಟೇನರ್‌ಗಳು, ಕೋಡಿಂಗ್ ಮಾದರಿ, ಫಾಂಟ್ ಸೈಜ್, ಬಾಪ್‌ಟೇಪ್ ಸೇರಿದಂತೆ ಎಲ್ಲವೂ ಏಕರೂಪದಲ್ಲಿರುವಂತೆ ತಿಳಿಸಿ ಮೇಲಿನ ಸಾಮಗ್ರಿಗಳು ಒಳಗೊಂಡಂತೆ ಎಲ್ಲಾ

| | | |
|---|---|---|
| | | ಪ್ಯಾಕಿಂಗ್ ಸಾಮಗ್ರಿಗಳನ್ನು ಖರೀದಿಸುವ ಮೊದಲು ಅದರ ಪ್ರಿಂಟ್ ಪ್ರೂಫ್ ಹಾಗೂ ಗುಣಮಟ್ಟದ ಅಂಶಗಳ ಬಗ್ಗೆ ಕಹಾಮದ ಮಾರುಕಟ್ಟೆ ಹಾಗೂ ಗುಣನಿಯಂತ್ರಣ ವಿಭಾಗದಿಂದ ಕಡ್ಡಾಯವಾಗಿ ಅನುಮೋದನೆಯನ್ನು ಪಡೆಯುಲು ಕ್ರಮವಿಡಲಾಗಿದೆ.<br><br>13) ಪ್ಯಾಕ್‌ಗಳ ಮೇಲೆ ಮುದ್ರಿತವಾಗಿರುವ ಕೋಡಿಂಗ್ (ಇಂಕ್‌ಜೆಟ್) ಅಂಶಗಳು ಗುಣನಿಯಂತ್ರಣ ವಿಭಾಗವು ನಿಗದಿಪಡಿಸಿರುವ ರೀತಿ ಏಕರೂಪವಾಗಿರುವಂತೆ ಮಾಡಲಾಗಿದೆ.<br><br>14) ತುಪ್ಪವನ್ನು ಡಿಪೋಗಳಿಗೆ ರವಾನೆ ಮಾಡುವಾಗ ಬ್ಯಾಚ್ ನಂಬರ್, ಉತ್ಪಾದನೆಯಾದ ದಿನಾಂಕ, ಇತರೆ ಮುಖ್ಯವಾದಂತಹ ವಿವರಗಳನ್ನು ಇನ್ವಾಯ್ಸ್‌ನಲ್ಲಿ ನಮೂದಿಸುವುದನ್ನು ಕಡ್ಡಾಯಗೊಳಿಸಲಾಗಿದೆ.<br><br>15) ಒಕ್ಕೂಟದ ವ್ಯಾಪ್ತಿಯಲ್ಲಿ ಯಾವುದೇ ಅಧಿಕೃತ ಮಾರಾಟಗಾರರು ಕಹಾಮವು ಸೂಚಿಸಿರುವ ದರಕ್ಕಿಂತ ಕಡಿಮೆ ದರದಲ್ಲಿ ಮಾರಾಟ ಮಾಡುತ್ತಿರುವುದು ಕಂಡು ಬಂದರೆ ಅಂತಹ ಮಾರಾಟಗಾರಿಕೆಯನ್ನು ರದ್ದುಗೊಳಿಸಿ, ಭದ್ರತಾ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲು ಸೂಚಿಸಲಾಗಿದೆ.<br><br>16) ಕಹಾಮ ವತಿಯಿಂದ ಮಾತ್ರ ಸಗಟು ಮಾರಾಟಗಾರರ ನೇಮಕ ಮಾಡಲು ಕ್ರಮವಿಡಲಾಗಿದೆ.<br><br>17) ಒಕ್ಕೂಟ/ಘಟಕವು ರಿಟೇಲ್ ದರವನ್ನು ಹೊರತುಪಡಿಸಿ ಉತ್ಪನ್ನಗಳನ್ನು ಇತರೆ ಯಾವುದೇ ದರಗಳಲ್ಲಿ/ಮಾದರಿಯಲ್ಲಿ/ಯೋಜನೆಗಳಲ್ಲಿ ಕಹಾಮ ಆದೇಶ/ಸೂಚನೆ ಹೊರತು ಮಾರಾಟ ಮಾಡುವಂತಿಲ್ಲ ಎಂದು ಆದೇಶಿಸಲಾಗಿದೆ.<br><br>18) 'ನಂದಿನಿ' ಹಾಲು ಮತ್ತು ಹಾಲಿನ ಉತ್ಪನ್ನಗಳನ್ನು ನಕಲಿ ಮಾಡುವವರ ವಿರುದ್ಧ ನೇರ ಕ್ರಮ ಕೈಗೊಳ್ಳಲು ನಂದಿನಿ ಬ್ರ್ಯಾಂಡನ್ನು 'well-known brand' ಅಡಿಯಲ್ಲಿ ನೋಂದಣಿ ಮಾಡುವ ಕ್ರಮ ಜಾರಿಯಲ್ಲಿರುತ್ತದೆ.<br><br>19) ನಂದಿನಿ ಬ್ರ್ಯಾಂಡ್‌ನ ಹೆಸರಿನಲ್ಲಿ ಕಲಬೆರಕೆ ಆಗುತ್ತಿರುವ ವಿಷಯವನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿ ರಾಜ್ಯದ ಹಾಲು ಉತ್ಪಾದಕರ ಹಾಗೂ ಗ್ರಾಹಕರ ಹಿತದೃಷ್ಟಿಯಿಂದ ಪ್ರಕರಣವನ್ನು ಸಿ.ಓ.ಡಿ ತನಿಖೆಗೆ ವಹಿಸಲು ನಿರ್ಧರಿಸಿದ್ದು, ಕ್ರಮ ಜಾರಿಯಲ್ಲಿರುತ್ತದೆ. |

| | | |
|---|---|---|
| | | ಈ ರೀತಿಯಾಗಿ ಕರ್ನಾಟಕ ಹಾಲು ಮಹಾಮಂಡಳವು 'ನಂದಿನಿ' ಬ್ರ್ಯಾಂಡಿಗೆ ಮಾರುಕಟ್ಟೆಯಲ್ಲಿ ಧಕ್ಕೆ ಆಗದಂತೆ ಹಾಗೂ ರಾಜ್ಯದ ಹಾಲು ಉತ್ಪಾದಕರಿಗೆ/ರೈತರಿಗೆ ತೊಂದರೆ ಆಗದಂತೆ ಎಲ್ಲಾ ಅಗತ್ಯ ಕಟ್ಟುನಿಟ್ಟಿನ ಕ್ರಮಗಳನ್ನು ಕೈಗೊಳ್ಳಲಾಗಿದೆ. |

**ಸಂಖ್ಯೆ ಸಿಒ 26 ಸಿಸಿಬಿ 2022**

(ಎಸ್. ಟಿ. ಸೋಮಶೇಖರ್)
ಸಹಕಾರ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 645
ಸದಸ್ಯರ ಹೆಸರು : ಶ್ರೀ ನಂಜೇಗೌಡ ಕೆ.ವೈ. (ಮಾಲೂರು)
ಉತ್ತರಿಸುವ ದಿನಾಂಕ : 18-02-2022
ಉತ್ತರಿಸುವ ಸಚಿವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಇಲಾಖಾ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಂಗನವಾಡಿ ಕಾರ್ಯಕರ್ತರು ಹಾಗೂ ಸಹಾಯಕರುಗಳಿಗೆ ಮಾಸಿಕ ನೀಡುತ್ತಿರುವ ಗೌರವ ಧನದ ಮೊತ್ತ ವೆಷ್ಟು; (ವಿವರ ಒದಗಿಸುವುದು) | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಡಿ ಕಾರ್ಯನಿರ್ವಹಿಸುತ್ತಿರುವ ಅಂಗನವಾಡಿ ಕಾರ್ಯಕರ್ತೆ, ಮಿನಿ ಅಂಗನವಾಡಿ ಕಾರ್ಯಕರ್ತೆ ಹಾಗೂ ಅಂಗನವಾಡಿ ಸಹಾಯಕಿಯರಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರದ ವತಿಯಿಂದ ನೀಡಲಾಗುತ್ತಿರುವ ಗೌರವ ಧನದ ವಿವರ ಈ ಕೆಳಕಂಡಂತಿರುತ್ತದೆ:- (ಕೋಷ್ಟಕ ಕೆಳಗೆ) |

(ರೂ. ಗಳಲ್ಲಿ)

| ವಿವರ | ಕೇಂದ್ರ ಸರ್ಕಾರದ ಗೌರವ ಧನ | ಕೇಂದ್ರ ಸರ್ಕಾರದ ಪಾಲು | ರಾಜ್ಯ ಸರ್ಕಾರದ ಪಾಲು | ರಾಜ್ಯ ಸರ್ಕಾರ ದಿಂದ ನೀಡುತ್ತಿರುವ ಹೆಚ್ಚುವರಿ ಗೌರವಧನ | ಒಟ್ಟು | ರಾಜ್ಯ ಸರ್ಕಾರ ದಿಂದ ನೀಡುತ್ತಿರುವ ಒಟ್ಟು ಗೌರವ ಧನ |
|---|---|---|---|---|---|---|
| ಅಂಗನವಾಡಿ ಕಾರ್ಯಕರ್ತೆ | 4500 | 2700 | 1800 | 5500 | 10000 | 7300 |
| ಅಂಗನವಾಡಿ ಸಹಾಯಕಿ | 2500 | 1500 | 1000 | 2750 | 5250 | 3750 |
| ಮಿನಿ ಅಂಗನವಾಡಿ ಕಾರ್ಯಕರ್ತೆ | 3500 | 2100 | 1400 | 2750 | 6250 | 4150 |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಆ. | ಹಾಲಿ ನೀಡುತ್ತಿರುವ ಗೌರವ ಧನವನ್ನು ಹೆಚ್ಚಿಸುವ ಉದ್ದೇಶ ಸರ್ಕಾರಕ್ಕಿದೆಯೇ; ಇದ್ದಲ್ಲಿ, ಯಾವಾಗ ಹೆಚ್ಚಿಸಲಾಗುವುದು; (ವಿವರ ಒದಗಿಸುವುದು) | ಅಂಗನವಾಡಿ ಕಾರ್ಯಕರ್ತೆ ಹಾಗೂ ಸಹಾಯಕಿಯರಿಗೆ ಇತ್ತೀಚಿಗೆ ಅಂದರೆ ಡಿಸೆಂಬರ್ 2019ರಲ್ಲಿ ಗೌರವಧನ ಹೆಚ್ಚಳ ಮಾಡಿರುವುದರಿಂದ ಪ್ರಸ್ತುತ ಗೌರವಧನ ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ.<br><br>ಸಮಗ್ರ ಶಿಶು ಅಭಿವೃದ್ಧಿ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಕೇಂದ್ರ ಸರ್ಕಾರವು ಗೌರವ ಧನವನ್ನು ಹೆಚ್ಚಿಸಿದ್ದಲ್ಲಿ ಕ್ರಮವಹಿಸಲಾಗುವುದು. |

| | | |
|---|---|---|
| ಇ) | ಮಾಲೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಅಂಗನವಾಡಿ ಕೇಂದ್ರಗಳಲ್ಲಿ ಖಾಲಿ ಇರುವ ಅಂಗನವಾಡಿ ಕಾರ್ಯಕರ್ತೆ ಹಾಗೂ ಸಹಾಯಕಿಯರ ಹುದ್ದೆಗಳೆಷ್ಟು; (ಗ್ರಾಮವಾರು ಖಾಲಿ ಹುದ್ದೆಗಳ ಮಾಹಿತಿ ಒದಗಿಸುವುದು) | ಮಾಲೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಅಂಗನವಾಡಿ ಕೇಂದ್ರಗಳಲ್ಲಿ 01 ಅಂಗನವಾಡಿ ಕಾರ್ಯಕರ್ತೆಯರ ಹುದ್ದೆ ಹಾಗೂ 13 ಅಂಗನವಾಡಿ ಸಹಾಯಕಿಯರ ಹುದ್ದೆಗಳು ಖಾಲಿ ಇರುತ್ತವೆ.<br><br>ಗ್ರಾಮವಾರು ಖಾಲಿ ಹುದ್ದೆಗಳ ಮಾಹಿತಿಯನ್ನು ಅನುಬಂಧ-1 ಮತ್ತು ಅನುಬಂಧ-2 ರಲ್ಲಿ ನೀಡಲಾಗಿದೆ. |
| ಈ) | ಹಾಗಿದ್ದಲ್ಲಿ, ಮಾಲೂರು ತಾಲ್ಲೂಕು ವ್ಯಾಪ್ತಿಯಲ್ಲಿ ಅಂಗನವಾಡಿ ಕೇಂದ್ರಗಳನ್ನು ಹೆಚ್ಚಿಸುವ ಉದ್ದೇಶ ಸರ್ಕಾರಕ್ಕಿದೆಯೇ; ಇದ್ದಲ್ಲಿ, ಯಾವ ಯಾವ ಗ್ರಾಮಗಳಲ್ಲಿ ಪ್ರಾರಂಭಿಸಲಾಗುವುದು? (ಗ್ರಾಮಗಳ ಮಾಹಿತಿ ನೀಡುವುದು) | ಯಾವುದೇ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |

ಸಂ: ಮಮಇ 36 ಐಸಿಡಿ 2022

(ಆಚಾರ್ ಹಾಲಪ್ಪ ಬಸಪ್ಪ)
ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು
ಮಕ್ಕಳ ಅಭಿವೃದ್ಧಿ ವಿಕಲಚೇತನರ ಹಾಗೂ
ಹಿರಿಯ ನಾಗರೀಕರ ಸಬಲೀಕರಣ ಸಚಿವರು.

# ಅನುಬಂಧ - 1

## ಎಲ್.ಎ.ಕ್ಯೂ- 645

**ಶಿಶು ಅಭಿವೃದ್ಧಿ ಯೋಜನೆ, ಮಾಲೂರು ಖಾಲಿ ಇರುವ ಅಂಗನವಾಡಿ ಕಾರ್ಯಕರ್ತೆಯರ ಹುದ್ದೆಗಳ ವಿವರ**

| ಕ್ರ.ಸಂ. | ಗ್ರಾಮ ಪಂಚಾಯಿತಿಯ ಹೆಸರು | ಅಂ.ಕೇಂದ್ರದ ಹೆಸರು | ಮೀಸಲಾತಿ | | | ಷರಾ |
|---|---|---|---|---|---|---|
| | | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಇತರೆ | |
| 1 | ಚಿಕ್ಕಕುಂತೂರು | ನಾರಾಯಣಪುರ | – | ಎಸ್.ಟಿ. | – | ಖಾಲಿ |

## ಅನುಬಂಧ – 2

## ಎಲ್.ಎ.ಕ್ಯೂ– 645

**ಶಿಶು ಅಭಿವೃದ್ಧಿ ಯೋಜನೆ, ಮಾಲೂರು ಖಾಲಿ ಇರುವ ಅಂಗನವಾಡಿ ಸಹಾಯಕಿಯರ ಹುದ್ದೆಗಳ ವಿವರ**

| ಕ್ರ ಸಂ. | ಗ್ರಾಮ ಪಂಚಾಯಿತಿಯ ಹೆಸರು | ಅಂ.ಕೇಂದ್ರದ ಹೆಸರು | ಮೀಸಲಾತಿ | | | ಷರಾ |
|---|---|---|---|---|---|---|
| | | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಇತರೆ | |
| 1 | ಹುಳದೇನಹಳ್ಳಿ | ಪದೇಒಬಟ್ಟಿ | ಎಸ್.ಸಿ | – | – | ಖಾಲಿ |
| 2 | ಕೊಂಡಶೆಟ್ಟಿಹಳ್ಳಿ | ನಕ್ಕನಹಳ್ಳಿ | – | – | ಇತರೆ | ಖಾಲಿ |
| 3 | ಮಾಸ್ತಿ | ಎ.ಡಿ ಕಾಲೋನಿ | ಎಸ್.ಸಿ | – | – | ಖಾಲಿ |
| 4 | ಮಾಸ್ತಿ | ಇಂದಿರಾನಗರ | – | – | ಇತರೆ | ಖಾಲಿ |
| 5 | ನೂಟುವೆ | ದೊಡ್ಡನಾಯಕನಹಳ್ಳಿ | – | – | ಇತರೆ | ಖಾಲಿ |
| 6 | ದೊಡ್ಡ ಶಿವಾರ–1 | ಗುಡ್ನೆಹಳ್ಳಿ | – | – | ಇತರೆ | ಖಾಲಿ |
| 7 | ಕಸಬಾ (ವಾರ್ಡ್‌ನಂ–5) | ಕುಂಬಾರಪೇಟೆ | – | – | ಇತರೆ | ಖಾಲಿ |
| 8 | ಕಸಬಾ (ವಾರ್ಡ್‌ನಂ–22) | ಆದರ್ಶ ನಗರ | – | – | ಇತರೆ | ಖಾಲಿ |
| 9 | ನೊಸಗೆರೆ | ಟೊಪ್ಪನಹಳ್ಳಿ | – | – | ಇತರೆ | ಖಾಲಿ |
| 10 | ಕೆ.ಜಿ. ಹಳ್ಳಿ | ಲಕ್ಷ್ಮೀಸಾಗರ | ಎಸ್.ಸಿ | – | – | ಖಾಲಿ |
| 11 | ಕುಡಿಯನೂರು | ಸೊಣಪ್ಪನಹಟ್ಟಿ | – | – | ಇತರೆ | ಖಾಲಿ |
| 12 | ಎಚ್. ಹೊಸಕೋಟೆ | ಪುರ | – | – | ಇತರೆ | ಖಾಲಿ |
| 13 | ಕಸಬಾ (ವಾರ್ಡ್‌ನಂ–18) | ಸಿ.ಪಿ ಬಡವಾಣೆ | – | – | ಇತರೆ | ಖಾಲಿ |

## ಅನುಬಂಧ–3

| ಎಲ್.ಎ.ಕ್ಯೂ– 645 | | | | | | |
|---|---|---|---|---|---|---|
| ಮಾಲೂರು ತಾಲ್ಲೂಕಿನಲ್ಲಿ ಹೊಸ ಅಂಗನವಾಡಿ ಅಗತ್ಯವಿರುವ ಕೇಂದ್ರಗಳ ಪಟ್ಟಿಯ ವಿವರ | | | | | | |
| ಕ್ರ ಸಂ | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಅಂ.ಕೇಂದ್ರದ ಹೆಸರು | ವಾರ್ಡ್ | ವಾರ್ಡ್ ಸಂಖ್ಯೆ | ಷರಾ |
| 1 | ಕೋಲಾರ | ಮಾಲೂರು | ಶಕ್ತಿನಗರ–1 | ಶಕ್ತಿನಗರ–1 | 21 | |
| 2 | ಕೋಲಾರ | ಮಾಲೂರು | ಲಾಯದ ಬೀದಿ | ಲಾಯದ ಬೀದಿ | 9 | |
| 3 | ಕೋಲಾರ | ಮಾಲೂರು | ಇಂದಿರಾ ನಗರ | ಇಂದಿರಾ ನಗರ | 27 | |
| 4 | ಕೋಲಾರ | ಮಾಲೂರು | ರಾಜೀವ್ ನಗರ | ರಾಜೀವ್ ನಗರ | 2 | |
| 5 | ಕೋಲಾರ | ಮಾಲೂರು | ಶಕ್ತಿನಗರ–2 | ಶಕ್ತಿನಗರ–2 | 20 | |
| 6 | ಕೋಲಾರ | ಮಾಲೂರು | ಪಟಾಲಮ್ಮಬಡಾವಣೆ | ಪಟಾಲಮ್ಮಬಡಾವಣೆ | 11 | |
| 7 | ಕೋಲಾರ | ಮಾಲೂರು | ಸಿ ಪಿ ಬಡಾವಣೆ | ಸಿ ಪಿ ಬಡಾವಣೆ | 18 | |
| 8 | ಕೋಲಾರ | ಮಾಲೂರು | ಕುಂಬಾರಪೇಟೆ | ಕುಂಬಾರಪೇಟೆ | 5 | |
| 9 | ಕೋಲಾರ | ಮಾಲೂರು | ಮಾರುತಿ ನಗರ | ಮಾರುತಿ ನಗರ | 16 | |
| 10 | ಕೋಲಾರ | ಮಾಲೂರು | ಆದರ್ಶ ನಗರ | ಆದರ್ಶ ನಗರ | 22 | |
| 11 | ಕೋಲಾರ | ಮಾಲೂರು | ವಾಲ್ಮೀಕಿ ಬಡಾವಣೆ | ಕ್ರಿಷ್ಣಪ್ಪ ಲೇಹೌಟ್ | 1 | |
| 12 | ಕೋಲಾರ | ಮಾಲೂರು | ಸುಭಾಷ್ ನಗರ | ಸುಭಾಷ್ ನಗರ | 25 | |



ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 646 |
| ಸದಸ್ಯರ ಹೆಸರು | : | ಶ್ರೀ ನಂಜೇಗೌಡ ಕೆ. ವೈ |
| ಉತ್ತರಿಸುವ ದಿನಾಂಕ | : | 18/02/2022 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪುರಸಭೆಗಳನ್ನು ನಗರಸಭೆಗಳನ್ನಾಗಿ ಮೇಲ್ದರ್ಜೆಗೇರಿಸಲು ಇರುವ ಮಾನದಂಡಗಳೇನು; (ಸಂಪೂರ್ಣ ಮಾಹಿತಿ ಒದಗಿಸುವುದು) | ಪುರಸಭೆಗಳನ್ನು ನಗರಸಭೆಗಳನ್ನಾಗಿ ಮೇಲ್ದರ್ಜೆಗೇರಿಸಲು ಕರ್ನಾಟಕ ಪೌರಸಭೆಗಳ ಅಧಿನಿಯಮ 1964 ರ ನಿಯಮ 3(1), 3(2) ರನ್ವಯ ಈ ಕೆಳಕಂಡ ಮಾನದಂಡಗಳನ್ನು ಅನುಸರಿಸಲಾಗುವುದು:<br>1. ಆ ಪ್ರದೇಶದ ಜನಸಂಖ್ಯೆ 50,000 ಕ್ಕೆ ಕಡಿಮೆ ಇಲ್ಲದಂತೆ ಹಾಗೂ 3 ಲಕ್ಷಕ್ಕೆ ಹೆಚ್ಚಿಲ್ಲದಂತಿರಬೇಕು,<br>2. ಅಂತಹ ಪ್ರದೇಶದ ಜನಸಂಖ್ಯೆಯ ಜನಸಾಂದ್ರತೆಯು ಆ ಪ್ರದೇಶದ ಒಂದು ಚದರ ಕಿ.ಮೀ. ವಿಸ್ತೀರ್ಣಕ್ಕೆ 1,500 ಕ್ಕಿಂತ ಕಡಿಮೆ ಇಲ್ಲದಿರುವುದು,<br>3. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗಾವಕಾಶಗಳ ಶೇಕಡಾವಾರು ಪ್ರಮಾಣವು ಒಟ್ಟು ಉದ್ಯೋಗದ ಪ್ರಮಾಣಕ್ಕಿಂತ ಶೇ.50 ಕ್ಕಿಂತ ಕಡಿಮೆ ಇಲ್ಲದಿರುವುದು,<br>4. ಹಿಂದಿನ ನಿಕಟಪೂರ್ವ ಜನಗಣತಿಯಲ್ಲಿ ಅಂತಹ ಪ್ರದೇಶದಿಂದ ಸ್ಥಳೀಯ ಆಡಳಿತಕ್ಕಾಗಿ ತೆರಿಗೆ ಮತ್ತು ತೆರಿಗೆಯಲ್ಲದ ಇತರ ಸಂಪನ್ಮೂಲಗಳಿಂದ ಉತ್ಪಾದಿತವಾದ ರಾಜಸ್ವ ವಾರ್ಷಿಕ ಒಂಭತ್ತು ಲಕ್ಷ ಅಥವಾ ವಾರ್ಷಿಕ ತಲಾ ಒಬ್ಬರಿಗೆ 45 ರೂಪಾಯಿಗಳ ದರದಂತೆ ಲೆಕ್ಕ ಹಾಕಲಾದ ಮೊತ್ತ ಇವೆರಡರಲ್ಲಿ ಯಾವುದು ಹೆಚ್ಚೋ ಆ ಮೊತ್ತಕ್ಕಿಂತ ಕಡಿಮೆ ಇರದ ಹೊರತು.<br>ಅಲ್ಲದೇ ಅಂಥ ಪ್ರದೇಶದಲ್ಲಿ ಜಿಲ್ಲಾ ಕೇಂದ್ರ ಕಾರ್ಯಸ್ಥಾನವು ಇದ್ದಲ್ಲಿ, ಆ ಪ್ರದೇಶವು 50,000 ಕ್ಕಿಂತ ಕಡಿಮೆ ಜನಸಂಖ್ಯೆಯನ್ನು ಹೊಂದಿದ್ದರೂ ಸಹ ಆ ಪ್ರದೇಶವನ್ನು ನಗರಸಭೆಯನ್ನಾಗಿ ಪರಿವರ್ತಿಸಬಹುದು. |
| ಆ) | ಹಾಗಿದ್ದಲ್ಲಿ, ಮೇಲ್ದರ್ಜೆಗೇರಿಸುವ ಸಂದರ್ಭದಲ್ಲಿ ಯಾವ ದಾಖಲೆಗಳನ್ನು ಸರ್ಕಾರಕ್ಕೆ ಸಲ್ಲಿಸಬೇಕಾಗುತ್ತದೆ; (ವಿವರ ಒದಗಿಸುವುದು) | ಮೇಲ್ಕಂಡ ಮಾನದಂಡಗಳನ್ವಯ ಅರ್ಹತೆ ಹೊಂದಿದ ಬಗ್ಗೆ ಅಗತ್ಯ ದಾಖಲೆಗಳೊಂದಿಗೆ ಸಂಬಂಧಪಟ್ಟ ಜಿಲ್ಲಾಧಿಕಾರಿಯವರು ಸೂಕ್ತ ಪ್ರಸ್ತಾವನೆ ಸಲ್ಲಿಸಬೇಕಾಗುತ್ತದೆ. |

| ಇ) | ಕೋಲಾರ ಜಿಲ್ಲೆ, ಮಾಲೂರು ಪುರಸಭೆಯನ್ನು ನಗರಸಭೆಯನ್ನಾಗಿ ಮೇಲ್ದರ್ಜೆಗೇರಿಸುವ ಉದ್ದೇಶ ಸರ್ಕಾರಕ್ಕಿದೆಯೇ; ಇದ್ದಲ್ಲಿ ಈ ಕುರಿತು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ವಿವರ ಒದಗಿಸುವುದು) | ಮಾಲೂರು ಪುರಸಭೆಯ ಜನಸಂಖ್ಯೆಯು 2011ರ ಜನಗಣತಿ ಅನುಸಾರ 40,050 ಇದ್ದು, ನಗರಸಭೆಯನ್ನಾಗಿ ಪರಿವರ್ತಿಸಲು ನಿಗದಿಪಡಿಸಿರುವ ಮಾನದಂಡಗಳನ್ವಯ ಕನಿಷ್ಟ ಜನಸಂಖ್ಯೆ 50,000 ಹೊಂದಿಲ್ಲವಾದ್ದರಿಂದ, ಮಾಲೂರು ಪುರಸಭೆಯನ್ನು ನಗರಸಭೆಯನ್ನಾಗಿಸಲು ಪ್ರಸ್ತುತ ಅವಕಾಶವಿರುವುದಿಲ್ಲ. |
|---|---|---|
| ಈ) | ಹಾಗಿದ್ದಲ್ಲಿ, ಪ್ರಸಕ್ತ ಸಾಲಿನಲ್ಲಿ ಮಾಲೂರು ಪುರಸಭೆಯನ್ನು ಅಭಿವೃದ್ದಿಪಡಿಸಲು ಸರ್ಕಾರ ಮಂಜೂರು ಮಾಡಿರುವ ಅನುದಾನವೆಷ್ಟು? (ಯೋಜನಾವಾರು ಮಾಹಿತಿ ಒದಗಿಸುವುದು) | ಪ್ರಸಕ್ತ ಸಾಲಿನಲ್ಲಿ ಮಾಲೂರು ಪುರಸಭೆಗೆ ಮಂಜೂರು ಮಾಡಿರುವ ಅನುದಾನದ ಮಾಹಿತಿ ವಿವರ:<br><br>**<u>ಮುಖ್ಯಮಂತ್ರಿಗಳ ಅಮೃತ್ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ ಹಂತ-4ರ ಯೋಜನೆಯಡಿ:</u>**<br>ಸರ್ಕಾರದ ಆದೇಶ ಸಂ. ನಅಇ 124 ಸಮಸ 2021, ಬೆಂಗಳೂರು, ದಿನಾಂಕ:14-01-2022 ರಂದು ಹೊರಡಿಸಿರುವಂತಹ ಆದೇಶದಲ್ಲಿ 2022-23 ರಿಂದ 2024-25ರವರೆಗೆ ನಗರ ಸ್ಥಳೀಯ ಸಂಸ್ಥೆಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಅವಕಾಶವನ್ನು ಕಲ್ಪಿಸಲಾಗಿದೆ. ಇದರಡಿಯಲ್ಲಿ ಮಾಲೂರು ಪುರಸಭೆಗೆ ರೂ.10.00 ಕೋಟಿಗಳನ್ನು ನಿಗಧಿಪಡಿಸಲಾಗಿದ್ದು, ಕ್ರಿಯಾ ಯೋಜನೆಯು ತಯಾರಿಕಾ ಹಂತದಲ್ಲಿರುತ್ತದೆ.<br><br>**<u>ಕೇಂದ್ರ ಪುರಸ್ಕೃತ ಸ್ವಚ್ಚ ಭಾರತ ಯೋಜನೆಯಡಿ:</u>**<br>ಪ್ರಸ್ತುತ ಸಾಲಿನಲ್ಲಿ ಮಾಲೂರು ಪುರಸಭೆಗೆ ರೂ.30 ಲಕ್ಷಗಳ ಅನುದಾನವನ್ನು ಮಂಜೂರು ಮಾಡಿ ಬಿಡುಗಡೆ ಮಾಡಲಾಗಿರುತ್ತದೆ.<br><br>**<u>15ನೇ ಹಣಕಾಸು ಆಯೋಗದ ಅನುದಾನ:</u>**<br>2021-22ನೇ ಸಾಲಿನ 15ನೇ ಹಣಕಾಸು ಆಯೋಗದ ಅನುದಾನದಡಿ ಒಟ್ಟು ಅನುದಾನ ರೂ. 184.00 ಲಕ್ಷಗಳನ್ನು ಹಂಚಿಕೆ ಮಾಡಿ ಈತನಕ ಮೊದಲನೆಯ ಕಂತಿನ ಅನುದಾನ ರೂ. 92.00 ಲಕ್ಷಗಳನ್ನು ಬಿಡುಗಡೆಗೊಳಿಸಲಾಗಿದೆ.<br><br>**<u>ಎಸ್.ಎಫ್.ಸಿ ಮುಕ್ತನಿಧಿ, ಎಸ್.ಎಫ್.ಸಿ ಕುಡಿಯುವ ನೀರಿನ ಯೋಜನೆ:</u>**<br>ಈ ಅನುದಾನದಡಿ ಮಂಜೂರು ಮಾಡಿರುವ ಅನುದಾನ ವಿವರಗಳನ್ನು ಅನುಬಂಧ-01 ರಂತೆ ಲಗತ್ತಿಸಿದೆ |

ಸಂಖ್ಯೆ: ನಅಇ 04 ಎಲ್ಎಕ್ಯೂ 2022

(ಎನ್. ನಾಗರಾಜು ಎಂ.ಟಿ.ಬಿ)
ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು.

## ABSTRACT REPORT

### SFC UNTIED PROGRAMME

Rs. in Lakhs

| SL.NO | District | Name Of the Town | ULB Type | Year | Grants Allocation | Grants Released | Expenditure | Total Approved Works | Completed Works |
|---|---|---|---|---|---|---|---|---|---|
| 1 | Kolar | Malur | TMC | 2021-22 | 69 | 51.75 | 9.0383 | 8 | 0 |

### SFC DRINKING WATER PROGRAMME

| SL.NO | District | Name Of the Town | ULB Type | Year | Grants Allocation | Grants Released | Expenditure | Total Approved Works | Completed Works |
|---|---|---|---|---|---|---|---|---|---|
| 1 | Kolar | Malur | TMC | 2021-22 | 25 | 25 | 25 | 1 | 1 |

CHIEF PROJECT OFFICER
Urban Poverty Alleviation Management Unit
Directorate of Municipal Administration,
Bangalore

# ಕರ್ನಾಟಕ ವಿಧಾನ ಸಭೆ

| | |
|---|---|
| ಸದಸ್ಯರ ಹೆಸರು | ಶ್ರೀ ನರೇಂದ್ರ ಆರ್ (ಹನೂರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 647 |
| ಉತ್ತರಿಸಬೇಕಾದ ದಿನಾಂಕ | 18.02.2022 |
| ಉತ್ತರಿಸಬೇಕಾದ ಸಚಿವರು | ನಗರಾಭಿವೃದ್ಧಿಸಚಿವರು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ | ಹನೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಹನೂರು ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಕಲ್ಪಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; (ವಿವರ ನೀಡುವುದು) | ರಾಜ್ಯದಲ್ಲಿ ಒಳಚರಂಡಿ ರಹಿತ 178 ನಗರ ಸ್ಥಳೀಯ ಸಂಸ್ಥೆಗಳಲ್ಲಿ ಮಲ ತ್ಯಾಜ್ಯವನ್ನು ಸಂಸ್ಕರಣೆ ಮಾಡದೇ ನದಿಗಳು ಮತ್ತು ಇತರೆ ನೀರಿನ ಮೂಲಗಳಿಗೆ ಹರಿಬಿಡುತ್ತಿರುವುದನ್ನು ತಡೆಗಟ್ಟುವ ನಿಟ್ಟಿನಲ್ಲಿ ಮಲತ್ಯಾಜ್ಯ ಮತ್ತು ಸೆಪ್ಟೇಜ್ ನಿರ್ವಹಣೆ (ಎಫ್‌ಎಸ್‌ಎಸ್‌ಎಂ) ಯೋಜನೆಯನ್ನು ಅನುಷ್ಠಾನಗೊಳಿಸಲು ಯೋಜಿಸಲಾಗಿರುತ್ತದೆ. ಅನುಷ್ಠಾನದ ಮೊದಲ ಹಂತದಲ್ಲಿ 55 ನಗರ ಸ್ಥಳೀಯ ಸಂಸ್ಥೆಗಳಲ್ಲಿ ಎಫ್‌ಎಸ್‌ಎಸ್‌ಎಂ ಘಟಕಗಳನ್ನು ಅಭಿವೃದ್ಧಿಪಡಿಸುವ ಪ್ರಸ್ತಾವನೆಗೆ ಸರ್ಕಾರದಿಂದ ಅನುಮೋದನೆ ನೀಡಲಾಗಿರುತ್ತದೆ. |
| ಆ | ಹಾಗಿದ್ದಲ್ಲಿ, ಒಳಚರಂಡಿ ವ್ಯವಸ್ಥೆ ಕಲ್ಪಿಸಲು ನಿಗಧಿಪಡಿಸಿರುವ ಅನುದಾನವೆಷ್ಟು; (ವಿವರ ನೀಡುವುದು) | ಹನೂರು ಪಟ್ಟಣಕ್ಕೆ ಎಫ್.ಎಸ್.ಎಸ್.ಎಮ್ ಘಟಕದ ಅಭಿವೃದ್ಧಿ ಕುರಿತಾಗಿನ ವಿವರದ ಸಂಬಂಧ ರಾಜ್ಯದ ಒಳಚರಂಡಿ ರಹಿತ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಮಲತ್ಯಾಜ್ಯ ನೀರುನ್ನು (black water) ಕೆರೆ, ನದಿಗಳ ಮೂಲಗಳಿಗೆ ಸೇರಿ ಮಾಲಿನ್ಯ ಮಾಡುವುದನ್ನು ತಡೆಗಟ್ಟಲು ಯು.ಜಿ.ಡಿ ವ್ಯವಸ್ಥೆ ಕಲ್ಪಿಸುವವರೆವಿಗೂ ಮಧ್ಯಂತರ ಪರಿಹಾರವಾಗಿ ಎಫ್.ಎಸ್.ಎಸ್.ಎಮ್ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತದೆ.<br><br>2020-21ನೇ ಸಾಲಿನ ಎಸ್.ಎಫ್.ಸಿ, ಸಾಮಾನ್ಯ ಮತ್ತು ಇತರೆ ಅವತರಣದಲ್ಲಿ ಎಫ್‌ಎಸ್‌ಎಸ್‌ಎಂ ಘಟಕಗಳನ್ನು ಅಭಿವೃದ್ಧಿಪಡಿಸುವ ಮೀಸಲಿಟ್ಟಿರುವ ರೂ.50.00 ಕೋಟಿಗಳ ಅನುದಾನದಲ್ಲಿ ಹನೂರು ಪಟ್ಟಣ ಪಂಚಾಯ್ತಿಯ ವ್ಯಾಪ್ತಿಯಲ್ಲಿ ಪಟ್ಟಣ ಪಂಚಾಯ್ತಿಯ 2011 ರ |

| | | |
|---|---|---|
| | | ಜನಸಂಖ್ಯೆ, ಮನೆಗಳ ಸಂಖ್ಯೆ, ಸಾರ್ವಜನಿಕ ಹಾಗೂ ಸಮುದಾಯ ಶೌಚಾಲಯ ಸಂಖ್ಯೆ ಅಧಾರಿಸಿ 3 ಕೆ.ಎಲ್.ಡಿ ಸಾಮರ್ಥ್ಯದ ಎಫ್.ಎಸ್.ಎಸ್.ಎಮ್ ಘಟಕವನ್ನು ಅಂದಾಜು ರೂ.1.78 ಕೋಟಿಗಳ ವೆಚ್ಚದಲ್ಲಿ (capex & opex) ಅಭಿವೃದ್ಧಿಪಡಿಸಲು ಯೋಜಿಸಿ, ಟೆಂಡರ್ ಆಹ್ವಾನಿಸಲು ಕ್ರಮವಹಿಸಲಾಗುತ್ತಿದೆ. |
| ಇ | ಅನುದಾನ ಮಂಜೂರು ಮಾಡದಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಅನುದಾನ ಮಂಜೂರು ಮಾಡಿ ಕಾಮಗಾರಿ ಕೈಗೊಳ್ಳಲು ಕ್ರಮ ವಹಿಸಲಾಗುವುದು? (ಸಂಪೂರ್ಣ ವಿವರ ನೀಡುವುದು) | ಮಲತ್ಯಾಜ್ಯ ನಿರ್ವಹಣೆ ಘಟಕದ ಅಭಿವೃದ್ಧಿಗೆ 1 ವರ್ಷ ಮತ್ತು 5 ವರ್ಷಗಳ ಕಾರ್ಯಚಾರಣೆ ಹಾಗೂ ನಿರ್ವಹಣೆಗಾಗಿ ಸೂಕ್ತ ಏಜೆನ್ಸಿಗಳನ್ನು ಆಯ್ಕೆ ಮಾಡಲು ಟೆಂಡರ್ ಆಹ್ವಾನಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ: ನಅಇ 24 ಯುಎಂಎಸ್ 2022

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 648 |
| ಸದಸ್ಯರ ಹೆಸರು | : | ಶ್ರೀ ನರೇಂದ್ರ ಆರ್. (ಹನೂರು) |
| ಉತ್ತರಿಸಬೇಕಾದ ದಿನಾಂಕ | : | 18-02-2022 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ ಸಾರ್ವಜನಿಕ ವಲಯ ಉದ್ಯಮಗಳ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಚಾಮರಾಜನಗರ ಜಿಲ್ಲೆಯ ಹನೂರು ಪಟ್ಟಣ ಪಂಚಾಯಿತಿಯು ಸ್ವಂತ ಕಟ್ಟಡ ಇಲ್ಲದೇ ಸಾರ್ವಜನಿಕರ ಕೆಲಸ ಕಾರ್ಯಗಳಿಗೆ ತೊಂದರೆ ಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುತ್ತದೆ. |
| (ಆ) | ಬಂದಿದ್ದಲ್ಲಿ, ಸದರಿ ಕಟ್ಟಡವನ್ನು ನಿರ್ಮಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ಹನೂರು ಪಟ್ಟಣ ಪಂಚಾಯಿತಿಗೆ ಸರ್ಕಾರದ ಆದೇಶ ಸಂಖ್ಯೆ:ನಅಇ 160 ಎಸ್.ಎಫ್.ಸಿ 2016, ದಿ:15.06.2016 ರಂತೆ ರೂ.100.00 ಲಕ್ಷಗಳನ್ನು ಮಂಜೂರಾತಿ ಮಾಡಿದ್ದು ಸದರಿ ಆದೇಶದ ಷರತ್ತಿನಲ್ಲಿ ಅನುಮೋದನೆ ನೀಡಿರುವ ಮೊತ್ತವನ್ನು ಹೊರತುಪಡಿಸಿ ಕಾಮಗಾರಿಯ ಅಗತ್ಯವಿರುವ ಉಳಿಕೆ ಮೊತ್ತವನ್ನು ಸ್ಥಳೀಯ ಸಂಸ್ಥೆಗಳು ಎಸ್.ಎಫ್.ಸಿ ವಿಶೇಷ ಅನುದಾನ, 14ನೇ ಹಣಕಾಸು ಆಯೋಗದ ಅನುದಾನ ಅಥವಾ ಸ್ವಂತ ಸಂಪನ್ಮೂಲ ಅನುದಾನದಿಂದ ಭರಿಸಲು ಕ್ರಮವಹಿಸಲು ಆದೇಶಿಸಲಾಗಿರುತ್ತದೆ. |
| (ಇ) | ಈ ಹಿಂದೆ ಕಟ್ಟಡ ನಿರ್ಮಿಸಲು ರೂ.3.5 ಕೋಟಿಗೆ ಅಂದಾಜು ಪಟ್ಟಿ ಸಲ್ಲಿಸಿದ್ದು, ಈ ಪೈಕಿ ರೂ.1.00 ಕೋಟಿ ಅನುದಾನ ಬಿಡುಗಡೆಯಾಗಿದ್ದು, ಉಳಿದ ರೂ.2.5 ಕೋಟಿಯನ್ನು ಬಿಡುಗಡೆ ಮಾಡಿ ಕಟ್ಟಡ ನಿರ್ಮಿಸಲು ಟೆಂಡರ್ ಪ್ರಕ್ರಿಯೆ ಪ್ರಾರಂಭಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; (ಸಂಪೂರ್ಣ ವಿವರ | ಹನೂರು ಪಟ್ಟಣ ಪಂಚಾಯಿತಿ ಕಟ್ಟಡ ನಿರ್ಮಿಸಲು ರೂ.3.50ಕೋಟಿಗೆ ಅಂದಾಜು ಪಟ್ಟಿ ಸಲ್ಲಿಸಿದ್ದು, ಈ ಪೈಕಿ ರೂ.1.00 ಕೋಟಿ ಅನುದಾನ ಬಿಡುಗಡೆಯಾಗಿದ್ದು, ಸಂಬಂಧಿಸಿದ ಪಿ.ಎಂ.ಸಿ ರವರಿಂದ ವಿನ್ಯಾಸವನ್ನು ಪಡೆದುಕೊಂಡು ಹಾಲಿ ಇರುವ ಅನುದಾನಕ್ಕೆ ಅನುಗುಣವಾಗಿ ಟೆಂಡರ್ ಕರೆದು ಕ್ರಮವಹಿಸಲಾಗುವುದು. |
| (ಈ) | ಹಾಗಿದ್ದಲ್ಲಿ, ರೂ.1.00 ಕೋಟಿ ಅನುದಾನ ಮಂಜೂರಾಗಿ 3 ವರ್ಷಗಳು ಕಳೆದರೂ ಇನ್ನೂ ಕಟ್ಟಡ ಕಾಮಗಾರಿ ಪ್ರಾರಂಭಿಸದಿರಲು ಕಾರಣಗಳೇನು; | ಈಗಾಗಲೇ ಸರ್ಕಾರದ ಆದೇಶ ಸಂಖ್ಯೆ:ನಅಇ 104 ಎಸ್.ಎಫ್.ಸಿ 2017, ದಿನಾಂಕ:21-03-2017ರಲ್ಲಿ ಬಿಡುಗಡೆಗೊಳಿಸಲಾಗಿರುವ ರೂ.1.00 ಕೋಟಿ ಅನುದಾನದೊಂದಿಗೆ, ಕಛೇರಿ ಕಟ್ಟಡ ಕಾಮಗಾರಿಗೆ ಅಗತ್ಯವಿರುವ ಉಳಿಕೆ ಮೊತ್ತವನ್ನು ಎಸ್.ಎಫ್.ಸಿ ವಿಶೇಷ ಅನುದಾನ, 14ನೇ ಹಣಕಾಸು ಆಯೋಗದ ಅನುದಾನ ಅಥವಾ ಸ್ವಂತ ಸಂಪನ್ಮೂಲ ಅನುದಾನದಿಂದ ಭರಿಸಿ ಕಛೇರಿ ಕಟ್ಟಡ ಕಾಮಗಾರಿ ಪ್ರಾರಂಭಿಸಲು ಕ್ರಮವಹಿಸಲಾಗುವುದು. |
| (ಉ) | ಅಭಿವೃದ್ಧಿ ಕಾರ್ಯದಲ್ಲಿ ಈ ರೀತಿಯ ನಿಧಾನಗತಿ ಧೋರಣೆ ಅನುಸರಿಸಲು ಕಾರಣಗಳೇನು? (ವಿವರ ನೀಡುವುದು) | |

ಕಡತ ಸಂಖ್ಯೆ:ನಅಇ 57 ಎಸ್.ಎಫ್.ಸಿ 2022

[ಎನ್. ನಾಗರಾಜ್ (ಎಂ.ಟಿ.ಬಿ)]
ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 649
ಸದಸ್ಯರ ಹೆಸರು : ಶ್ರೀ ಅಬ್ಬಯ್ಯ ಪ್ರಸಾದ್ (ಹುಬ್ಬಳ್ಳಿ-ಧಾರವಾಡ ಪೂರ್ವ)
ಉತ್ತರಿಸಬೇಕಾದ ದಿನಾಂಕ : 18/02/2022
ಉತ್ತರಿಸಬೇಕಾದ ಸಚಿವರು : ನಗರಾಭಿವೃದ್ಧಿ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಹುಬ್ಬಳ್ಳಿ-ಧಾರವಾಡ ಪೂರ್ವ ಮತಕ್ಷೇತ್ರದ ಹುಬ್ಬಳ್ಳಿ-ಧಾರವಾಡ ಮಹಾನಗರಪಾಲಿಕೆ ವ್ಯಾಪ್ತಿಯಲ್ಲಿ ಬರುವ ನಾಲಾ ದುರಸ್ತಿಯಲ್ಲಿದ್ದು, ಕೆಲವು ಕಡೆ ಅತಿಕ್ರಮಣ ಹಾಗೂ ತ್ಯಾಜ್ಯ ಸಂಗ್ರಹಣ ಕೇಂದ್ರವಾಗಿದ್ದು, ಮಳೆಗಾಲದಲ್ಲಿ ಪ್ರವಾಹ ಬಂದಲ್ಲಿ ಪಾಲಿಕೆ ವ್ಯಾಪ್ತಿಯಲ್ಲಿನ ಪ್ರದೇಶಕ್ಕೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ; | ಬಂದಿದೆ. |
| ಆ) | ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮವೇನು;(ವಿವರ ನೀಡುವುದು) | ಮಳೆಗಾಲದ ಪೂರ್ವದಲ್ಲಿ ಯಂತ್ರೋಪಕರಣಗಳನ್ನು ಬಳಸಿ ನಾಲಾದಲ್ಲಿ ಸಂಗ್ರಹಗೊಂಡ ತ್ಯಾಜ್ಯವನ್ನು ಹೊರಹಾಕಲು ಕ್ರಮ ತೆಗೆದುಕೊಳ್ಳಲಾಗುತ್ತಿದೆ ಹಾಗೂ ಅತಿಕ್ರಮಣ ತೆರವುಗೊಳಿಸಲು ಕ್ರಮ ತೆಗೆದುಕೊಳ್ಳಲಾಗುತ್ತಿದೆ. ಅನುದಾನದ ಲಭ್ಯತೆಗನುಗುಣವಾಗಿ ನಾಲಾ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲಾಗುವುದು. |
| ಇ) | ಹಾಗಿದ್ದಲ್ಲಿ, ನಾಲಾ ದುರಸ್ತಿಗೊಳಿಸಿ ಅಭಿವೃದ್ಧಿಪಡಿಸುವಂತೆ ಪ್ರಸ್ತಾವನೆ ಸಲ್ಲಿಸಿದ್ದರೂ ವಿಳಂಬವಾಗಲು ಕಾರಣಗಳೇನು? (ವಿವರ ನೀಡುವುದು) | ನಾಲಾ ದುರಸ್ಥಿಗೆ ಹಾಗೂ ಅಭಿವೃದ್ಧಿಗೆ ಯಾವುದೇ ಪ್ರಸ್ತಾವನೆ ಸ್ವೀಕೃತವಾಗಿರುವುದಿಲ್ಲ. |

ಸಂಖ್ಯೆ: ನಅಇ 13 ಹೆಚ್‌ಡಿಎಂಸಿ 2022(ಇ)

(ಬಿ.ಎ. ಬಸವರಾಜ)
ನಗರಾಭಿವೃದ್ಧಿಸಚಿವರು

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು

ಕರ್ನಾಟಕ ವಿಧಾನಸಭೆ

| | | | |
|---|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 650 |
| 2. | ಸದಸ್ಯರ ಹೆಸರು | : | ಶ್ರೀ ಕುಮಾರ ಬಂಗಾರಪ್ಪ ಎಸ್. |
| 3. | ಉತ್ತರಿಸಬೇಕಾದ ದಿನಾಂಕ | : | 18.02.2022 |
| 4. | ಉತ್ತರಿಸುವ ಸಚಿವರು | : | ಸಹಕಾರ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ನಂಜುಂಡಪ್ಪ ವರದಿಯ ಪ್ರಕಾರ ಹಿಂದುಳಿದ ತಾಲ್ಲೂಕಾಗಿರುವ ಸೊರಬ ತಾಲ್ಲೂಕಿನ ಸೊರಬ ಪಟ್ಟಣದ ಆನವಟ್ಟಿ, ಜಡೆ ಹಾಗೂ ತಾಳಗುಪ್ಪ ಹೋಬಳಿಯ ತಾಳಗುಪ್ಪ ಸಂತೆ ಮೈದಾನಗಳನ್ನು ಅಭಿವೃದ್ಧಿಪಡಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಈ ಹಿಂದ ಸೊರಬ ತಾಲ್ಲೂಕಿನ ಆನವಟ್ಟಿ ಸಂತೆ ಮೈದಾನವನ್ನು ನಬಾರ್ಡ್ ಸಂಸ್ಥೆಯ 2007-18ನೇ ಸಾಲಿನ ಆರ್.ಐ.ಡಿ.ಎಫ್-12ರ ಯೋಜನೆಯಡಿ ರೂ.10.49 ಲಕ್ಷಗಳ ವೆಚ್ಚ, 2008-09ನೇ ಸಾಲಿನ ಆರ್.ಐ.ಡಿ.ಎಫ್-13ರ ಯೋಜನೆಯಡಿ ರೂ.16.43 ಲಕ್ಷಗಳ ವೆಚ್ಚ ಹಾಗೂ 2018-19ನೇ ಸಾಲಿನ ಡಬ್ಲ್ಯೂ.ಐ.ಎಫ್ 2014-15ರ ಯೋಜನೆಯಡಿ ರೂ.100.00 ಲಕ್ಷಗಳ ವೆಚ್ಚ ಒಟ್ಟಾರೆಯಾಗಿ ರೂ.126.92 ಲಕ್ಷಗಳ ಮೊತ್ತದಲ್ಲಿ ಅಭಿವೃದ್ಧಿಪಡಿಸಲಾಗಿದೆ.<br><br>ಸೊರಬ ತಾಲ್ಲೂಕಿನ ಜಡೆ ಸಂತೆ ಮೈದಾನವನ್ನು 2001-02ನೇ ಸಾಲಿನ ಆರ್.ಐ.ಡಿ.ಎಫ್-6 ಯೋಜನೆಯಡಿ ರೂ.14.65 ಲಕ್ಷಗಳ ವೆಚ್ಚದಲ್ಲಿ ಅಭಿವೃದ್ಧಿಪಡಿಸಲಾಗಿದೆ.<br><br>ಪ್ರಸ್ತುತ ಸಂತೆ ಮೈದಾನಗಳನ್ನು ಅಭಿವೃದ್ಧಿಪಡಿಸಲು ಯಾವುದೇ ಕಾರ್ಯಕ್ರಮ, ಯೋಜನೆ ಇರುವುದಿಲ್ಲ. ಹಾಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಕಾರ್ಯವ್ಯಾಪ್ತಿಗೆ ಸಂತೆ ಮೈದಾನಗಳ ಅಭಿವೃದ್ಧಿ ವಿಷಯ ಬರುತ್ತದೆ. |
| ಆ | ಇದ್ದಲ್ಲಿ, ಸದರಿ ಪ್ರದೇಶದ ಸಂತೆ ಮೈದಾನಗಳ ಅಭಿವೃದ್ಧಿಗೆ ಯಾವಾಗ ಅನುದಾನ ಮಂಜೂರು ಮಾಡಿ ಕಾಮಗಾರಿ ಪ್ರಾರಂಭಿಸಲಾಗುವುದು? (ವಿವರ ನೀಡುವುದು) | |

ಸಂಖ್ಯೆ: ಸಿಒ 32 ಎಂಆರ್ಇ 2022

(ಎಸ್.ಟಿ.ಸೋಮಶೇಖರ್)

ಸಹಕಾರ ಸಚಿವರು

ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 651

ಸದಸ್ಯರು ಹೆಸರು : ಶ್ರೀ ಕುಮಾರ್ ಬಂಗಾರಪ್ಪ ಎಸ್. (ಸೊರಬ)

ಉತ್ತರಿಸುವ ದಿನಾಂಕ : 18.02.2022

ಉತ್ತರಿಸುವ ಸಚಿವರು : ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ ಸಾರ್ವಜನಿಕ ವಲಯ ಉದ್ಯಮಗಳ ಸಚಿವರು.

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ನಂಜುಂಡಪ್ಪ ವರದಿಯ ಪ್ರಕಾರ ಹಿಂದುಳಿದ ತಾಲ್ಲೂಕಾಗಿರುವ ಸೊರಬ ತಾಲ್ಲೂಕಿನ ಪುರಸಭೆ ಹಾಗೂ ಪಟ್ಟಣ ಪಂಚಾಯತಿ ಅನವಟ್ಟಿಗಳಲ್ಲಿ ಅಧಿಕಾರಿಗಳ ಹಾಗೂ ಸಿಬ್ಬಂದಿಗಳ ತೀವ್ರ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು; | ಸೊರಬ ಪುರಸಭೆಯಲ್ಲಿ ಮಂಜೂರಾದ 97 ಹುದ್ದೆಗಳಿಗೆದುರಾಗಿ 25 ಖಾಯಂ ನೌಕರರು ಮತ್ತು 23 ಗುತ್ತಿಗೆ, ಹೊರಗುತ್ತಿಗೆ, ದಿನಗೂಲಿ, ನೇರಪಾವತಿಯಡಿ ಸೇರಿ ಒಟ್ಟು 48 ಮಂದಿ ನೌಕರರು ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಅನವಟ್ಟಿ ಪಟ್ಟಣ ಪಂಚಾಯತಿಯಲ್ಲಿ ಮಂಜೂರಾದ 40 ಹುದ್ದೆಗಳಿಗೆದುರಾಗಿ 32 ಗುತ್ತಿಗೆ, ಹೊರಗುತ್ತಿಗೆ, ದಿನಗೂಲಿ, ನೇರಪಾವತಿಯಡಿ ನೌಕರರು ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಮೇಲಿನ ಎರಡು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಹಾಲಿ ಇರುವ ಸಿಬ್ಬಂದಿಗಳಿಂದಲೇ ಕರ್ತವ್ಯ ನಿರ್ವಹಿಸಲಾಗುತ್ತಿದೆ.<br><br>ಇದಲ್ಲದೆ, ಕರ್ನಾಟಕ ಲೋಕಸೇವಾ ಆಯೋಗದಿಂದ ಗ್ರೂಪ್ ಬಿ ಮತ್ತು ಗ್ರೂಪ್ ಸಿ ವೃಂದದ (ಹೈದ್ರಾಬಾದ್ ಕರ್ನಾಟಕ ಪ್ರದೇಶದ ಒಳಗೊಂಡು) 553 ಹುದ್ದೆಗಳ ಆಯ್ಕೆಪಟ್ಟಿ ಕರ್ನಾಟಕ ಲೋಕಸೇವಾ ಆಯೋಗದಿಂದ ಸ್ವೀಕೃತವಾಗಬೇಕಿರುತ್ತದೆ. ನೇರ ನೇಮಕಾತಿಯಡಿ ಖಾಲಿ ಇರುವ ನಗರ ಸ್ಥಳೀಯ ಸಂಸ್ಥೆಗಳಲ್ಲಿನ ಮೂಲ ವೃಂದದ 293 ಹುದ್ದೆಗಳು ಹಾಗೂ ಹೈದ್ರಾಬಾದ್-ಕರ್ನಾಟಕ ಪ್ರದೇಶದ 24 ಹುದ್ದೆಗಳನ್ನು ಭರ್ತಿ ಮಾಡಲು ಕ್ರಮವಹಿಸಲಾಗಿದೆ.<br><br>ಮುಂಬಡ್ತಿ ಖೋಟಾದಡಿಯಲ್ಲಿ ಖಾಲಿ ಇರುವ ಗ್ರೂಪ್ "ಬಿ" ಮತ್ತು "ಸಿ" ವೃಂದದ ಹುದ್ದೆಗಳನ್ನು ನಿಯಮಾನುಸಾರ ಭರ್ತಿ |

